# ಮಲೆನಾಡಿನ ಚಿತ್ರಗಳು



ಕೆ. ವಿ. ಪುಟ್ಟಪ್ಪ, ಎಂ.ಎ.

೧೯೩೩

ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು

ಬೆಂಗಳೂರು

# ವಿಷಯ ಸೂಚಿಕೆ


| | | |
|---|---|---|
| ೧. | ಮುನ್ನುಡಿ | v |
| ೨. | ಮಲೆನಾಡಿಗೆ ಬಾ (ಕವಿತ) | xvii |
| ೩. | ಹಾಸ್ಯದ ಚಟಾಕಿ | ೧ |
| ೪. | ಕಾಡಿನಲ್ಲಿ ಕಳೆದ ಒಂದಿರುಳು | ೧೭ |
| ೫ | ಅಜ್ಜಯ್ಯನ ಅಭ್ಯಂಜನ | ೩೩ |
| ೬ | ಬಂದನಾ ಹುಲಿರಾಯನು | ೪೩ |
| ೭ | ಪುಟ್ಟಾಚಾರಿಯ ಕಾಡುಕೋಳಿ | ೫೯ |
| ೮. | ಮನೆಯ ಶಾಲೆಯ ಐಗಳಮಾಲೆ | ೭೩ |
| ೯. | ತೋಟದಾಚೆಯ ಭೂತ | ೮೪ |
| ೧೦. | ಅಣ್ಣಪ್ಪನ ರೇಷ್ಮೆ ಕಾಯಿಲೆ | ೯೩ |
| ೧೧. | ಮಲೆನಾಡಿನ ಗೋಪಾಲಕರು | ೧೦೧ |
| ೧೨. | ಜೇನುಬೇಟೆ | ೧೧೨ |
| ೧೩ | ಕತೆಗಾರ ಮಂಜಣ್ಣ | ೧೨೩ |
| ೧೪. | ರಾಮರಾವಣರ ಯುದ್ಧ | ೧೩೨ |

# ಮುನ್ನುಡಿ

ನನಹು ಬಾಳಿನ ಬುತ್ತಿ, ಅನುಭವಗಳ ಅಕ್ಷಯ ನಿಧಿ. ಜೀವನ ಯಾತ್ರೆಯು ಬೇಸರವಾದಾಗ, ಜೀವನದಲ್ಲಿ ನವೀನತೆ ಮೊಳೆಯದೆ ಮುಂಕು ಕವಿದಾಗ, ಜೀವನದಲ್ಲಿ ಬಿಸಿಲ ಬೇಗೆಯು ಹೆಚ್ಚಿ ಬಳಲಿದಾಗ ಹಾದಿಯ ಬಳಿ ದಟ್ಟವಾಗಿ ಸೊಂಪಿಡಿದು ಬೆಳೆದ ಮರದ ತಣ್ಣೆಳಲಿನ ತಂಪಿನಲ್ಲಿ, ಮೊರೆದು ಹರಿಯುವ ತೊರೆಯ ಮಂಜುಳನಾದವನ್ನು ಆಲಿಸುತ್ತಾ ಆ ಬುತ್ತಿಯನ್ನು ಬಿಚ್ಚಿ ಉಣಬಹುದು; ತಣಿಯಬಹುದು; ದಣಿವಾರಿಸಿಕೊಳ್ಳಬಹುದು. ನಮಗೆ ಬೇಕಾದವರು, ನಮ್ಮ ಜೀವನ ಅನುಭವಗಳಲ್ಲಿ ಒಲ್ಮೆಯುಳ್ಳವರು ಬಳಿಯಿದ್ದರೆ ಅವರಿಗೂ ಆ ಬುತ್ತಿಯ ಪರಿಚಯ ಮಾಡಿಕೊಟ್ಟು ಒಂಟಿಯಾಗಿ ಅನುಭವಿಸುವ ಸುಖವನ್ನು ಇಮ್ಮಡಿಯಾಗಿ ಅನುಭವಿಸಬಹುದು. ಆಲಿಸುವವರಲ್ಲಿ ತಾತ್ಸಾರವಾಗಲಿ, ವ್ಯಂಗ್ಯ ಪರಿಹಾಸ್ಯವಾಗಲಿ, ಜಿಹಾಸೆಯಾಗಲಿ, ಜುಗುಪ್ಸೆಯಾಗಲಿ ತೋರಿ ಬಂದರೆ ಬಾಯಿಮುಚ್ಚಿಕೊಂಡು ಮನದಲ್ಲಿಯೇ ಬುತ್ತಿಯೂಟ ಮಾಡಬಹುದು.

ಆ ಬುತ್ತಿಯಲ್ಲಿ ಸುಖಗಳಂತೆ ಕಷ್ಟಗಳೂ ಮನೆ ಮಾಡಿಕೊಂಡಿರುತ್ತವೆ. ಆದರೆ ಕಳೆದ ಕಾಲವು ಸ್ಮೃತಿಯ ವಜ್ರಪಂಜರದಲ್ಲಿ ಆ ಅನುಭವಗಳನ್ನು ಬಂಧಿಸಿರುವುದರಿಂದ ನಮಗೆ ಅವುಗಳ ಭಯಂಕರತೆಗಿಂತಲೂ ಮನೋಹರತೆಯೇ ಹೆಚ್ಚಾಗಿ ಎದೆಮುಟ್ಟುತ್ತದೆ. ಮೃಗಶಾಲೆಯಲ್ಲಿ ಪಂಜರದೊಳಗಿರುವ ಹುಲಿಯನ್ನೂ ಗಿಳಿಯನ್ನೂ ನಾವು ನಿರ್ಭರತೆಯಿಂದ ನೋಡಿ ಆನಂದಪಡುವಂತೆ ಕಾಲಪಂಜರದಲ್ಲಿ ಸಿಕ್ಕಿಬಿದ್ದ ಕಷ್ಟಸುಖಾನುಭವಗಳನ್ನು ಸಮದೃಷ್ಟಿಯಿಂದ ನೋಡಲು ಸಮರ್ಥರಾಗುತ್ತೇವೆ. ಒಂದು ವೇಳೆ ನಡುಗಿದರೂ ಬಿಸುಸುಯ್ದರೂ ಕಂಬನಿಗರೆದರೂ ರಂಗಭೂಮಿಯಲ್ಲಿ ರುದ್ರನಾಟಕಗಳನ್ನು ನೋಡಿ ದುಃಖಪಟ್ಟರೂ ಆನಂದಪಡುವಂತೆ ಆಗುತ್ತದೆಯೇ ಹೊರತು ಕಷ್ಟಗಳನ್ನು ಸಾಕ್ಷಾತ್ತಾಗಿ ಅನುಭವಿಸಿದಂತೆ ಉಗ್ರವಾಗುವುದಿಲ್ಲ ಆದ್ದ

ರಿಂದ ನೆನಹಿನಲ್ಲಿ ಒಂದು ತೆರನಾದ ನಿಷ್ಕಾಮತೆಯೂ ಶಾಂತಿಯೂ ಇರುತ್ತದೆ.

ಮನಸ್ಸಿಗೆ ಜೀವನದ ಅನುಭವಗಳನ್ನು ಆಯ್ದಿಟ್ಟುಕೊಳ್ಳುವ ಶಕ್ತಿಯಿದೆ. ತನಗೆ ಬೇಕಾದುದನ್ನು—ಅದು ಹಿತವಾಗಿರಲಿ ಅಹಿತವಾಗಿರಲಿ—ಉಳಿಸಿಕೊಂಡು ಉಳಿದುದನ್ನು ಮರೆತು ಬಿಡುತ್ತದೆ. ಏಕೆಂದರೆ ಎಲ್ಲ ಸಣ್ಣಪುಟ್ಟ ಸಾಮಾನ್ಯ ನೀರಸ ಅನುಭವಗಳನ್ನು ನೆನಪಿನಲ್ಲಿ ಇಡುವುದೆಂದರೆ ಅದಕ್ಕೆ ಹೊರಲಾರದ ಭಾರವಾಗುತ್ತದೆ. ಈ ಆಯ್ಕೆಯ ವಿಚಾರದಲ್ಲಿ ಮನಸ್ಸು ನಿರಂಕುಶ ಪ್ರಭು, ಅದು ಯಾವ ಕಟ್ಟುಕಟ್ಟಳೆಗಳಿಗೂ ತಲೆಬಾಗಿ ನಡೆಯುವಂತೆ ತೋರುವುದಿಲ್ಲ. ವಿಚಾರದೃಷ್ಟಿಗೆ ದೊಡ್ಡದಾಗಿ ತೋರುವುದನ್ನು ಮನಸ್ಸು ಸಂಪೂರ್ಣವಾಗಿ ಮರೆತುಬಿಡಬಹುದು, ಕೆಲಸಕ್ಕೆ ಬಾರದಂತೆ ತೋರುವುದನ್ನು ಅದು ಪ್ರೀತಿಯಿಂದ ಕಾಪಾಡಬಹುದು. ದೊಡ್ಡ ಅಧಿಕಾರಿಯೊಡನೆಯೋ ಅಥವಾ ಐಶ್ವರ್ಯವಂತರೊಡನೆಯೋ ಕಳೆದ ಕಾಲವನ್ನಾಗಲಿ ಆಡಿದ ಮಾತುಗಳನ್ನಾಗಲಿ ಅದು ಸಂಪೂರ್ಣವಾಗಿ ತಿರಸ್ಕರಿಸಿ ಮರೆತುಬಿಡಬಹುದು; ದರಿದ್ರನೊಡನೆಯೋ ಅನಾಮಧೇಯನೊಡನೆಯೋ ಕಳೆದ ಕಾಲವನ್ನೂ ನುಡಿದ ಮಾತುಗಳನ್ನೂ ಪೂಜ್ಯ ಬುದ್ಧಿಯಿಂದ ಪಾಲಿಸಬಹುದು; ಈ ವಿಷಯದಲ್ಲಿ ಮನಸ್ಸು ಬಹುದೊಡ್ಡ ಪಕ್ಷಪಾತಿ.

ಜೀವನದ ಸಂಪತ್ತು ಅದರ ಅನುಭವಗಳಲ್ಲಿದೆ. ನೆನಹು ಆ ಅನುಭವಗಳ ನಿಧಿ. ನೆನಹಿನಲ್ಲಿ ಮಹತ್ತಾದ ವಿಷಯಗಳನ್ನಾಗಲಿ ಚಿತ್ರಗಳನ್ನಾಗಲಿ ದೃಶ್ಯಗಳನ್ನಾಗಲಿ ವ್ಯಕ್ತಿಗಳನ್ನಾಗಲಿ ತುಂಬಿಕೊಳ್ಳದ ನರಸ ಆತ್ಮವು ದಾರಿದ್ರ್ಯದ ಸೀಮೆ. ಸ್ಮೃತಿಮಂದಿರದಲ್ಲಿ ಆರಾಧನೆಯ ದೇವತೆಗಳು ಹೆಚ್ಚಿದಷ್ಟೂ ಮನುಷ್ಯನು ಶ್ರೀಮಂತನಾಗುತ್ತಾನೆ; ಪವಿತ್ರನಾಗುತ್ತಾನೆ, ಪೂಜ್ಯನಾಗುತ್ತಾನೆ. ಜೀವನದಲ್ಲಿ ನಾವು ಸಂಧಿಸುವ ಮಹಾ ಘಟನೆಗಳನ್ನೂ ಸನ್ನಿವೇಶಗಳನ್ನೂ ದೃಶ್ಯಗಳನ್ನೂ ಕಲ್ಪನೆಯಲ್ಲಿ ಸೆರೆಹಿಡಿದು, ಕಾಲದೇಶಗಳ ನಶ್ವರಜಾಲದಿಂದ

ಪೊರೆದು, ಪ್ರತಿಭೆಯ ಅಮೃತಸೇಚನೆಯಿಂದ ಅವುಗಳನ್ನು ಸ್ಮೃತಿ ಮಂದಿರದಲ್ಲಿ ಶಾಶ್ವತಗೈಯಬೇಕು. ಹಾಗೆ ಮಾಡುವುದರಿಂದ ನಮ್ಮ ನೆನಹಿನ ಬೊಕ್ಕಸದಲ್ಲಿ ಅಪೂರ್ವ ಅನುಭವಗಳು ಸಂಗ್ರಹವಾಗುತ್ತವೆ. ಯಾವಾಗ ಬೇಕೆಂದರಾಗ ಆ ವರ್ಣಮಯವಾದ ಗಾನಮಯವಾದ ರೂಪರಸಮಯವಾದ ಮನಸ್ಸಿನ ಅಲಕಾವತಿಯನ್ನು ಕಲ್ಪನೆಯ ಇಂದ್ರಧನುಪಥದಿಂದ ಪ್ರವೇಶಿಸಿ ಕಾಲದೇಶಾತೀತರಾಗಿ ನಲಿಯ ಬಹುದು. ನಾವು ಮೈಸೂರಿನ ಸಂತೆಪೇಟೆಯ ಹೋಟಲಿನ ಗಲಿಬಿಲಿ ಗಲೀಜುಗಳಲ್ಲಿದ್ದರೂ ಮಲೆನಾಡಿನ ಕವಿಶೈಲ ನವಿಲುಕಲ್ಲುಗಳ ನೆತ್ತಿಯ ಚೇತೋಹಾರಿಯಾದ ವಾತಾವರಣದಲ್ಲಿ ರಸಋಷಿಗಳಾಗಿರಬಹುದು.

ನನ್ನ ಜೀವನವೆಲ್ಲ ಕಲ್ಪನೆ ಸ್ಮೃತಿಗಳ ಕೃಪೆಯಿಂದ ಸುಖಶಾಂತಿ ಪೂರ್ಣವಾಗಿದೆ. ನಾನು ಮನುಷ್ಯ ನಿರ್ಮಿತ ದೇವಾಲಯಗಳಿಗೆ ಹೋಗಬೇಕಾಗಿಲ್ಲ. ಪ್ರಕೃತಿಯು ಅಲ್ಲಲ್ಲಿ ಆಗಾಗ ದಾನಮಾಡಿರುವ ಭವ್ಯಸುಂದರ ದೃಶ್ಯಗಳು ನನ್ನ ಕಲ್ಪನೆಯಲ್ಲಿ ಸೆರೆಯಾಗಿರುವುದರಿಂದ ನಾನು ಬಯಸಿದಾಗ ಅವುಗಳ ದರ್ಶನವಾಗುತ್ತದೆ. ಆ ದರ್ಶನಗಳ ಮುಂದೆ ನರನಿರ್ಮಿತ ದೇವಾಲಯಗಳು ಕ್ಷುದ್ರವಾಗುತ್ತವೆ. ಉಳಿದ ಹಿರಿಮನೆ ಅರಮನೆಗಳ ಮಾತಂತಿರಲಿ! ನಾನು ಮೈಸೂರಿನಲ್ಲಿದ್ದರೂ ಪ್ರತಿಪ್ರಾತಃಕಾಲ ನವಿಲುಕಲ್ಲಿನಲ್ಲಿಯೂ ಪ್ರತಿಸಾಯಂಕಾಲ ಕವಿ ಶೈಲದಲ್ಲಿಯೂ ಕುಳಿತು ಧ್ಯಾನಮಾಡುತ್ತೇನೆ. ಆ ಪರ್ವತ ಶ್ರೇಣಿ ಗಳು, ಆ ವಿಶಾಲ ನೀಲಗಗನ, ಆ ಅಪಾರ ಅರಣ್ಯರಾಶಿ, ಆ ಸಹಸ್ರ ಪಕ್ಷಿಗಳ ವಸಂತಗಾನ, ಆ ಹಸುರಿನ ಹೆಮ್ಮೆ, ಆ ಗಂಭೀರ ಮೌನ, ಆ ದಿನಾಂತ ಸಮಯದ ಪವಿತ್ರಶಾಂತಿ, ಸಂಧ್ಯಾಕಾಶದಲ್ಲಿ ಜರಗುವ ಆ ಬಣ್ಣಗಳ ಮೆರವಣಿಗೆ, ಆ ಮುಗಿಲುಗಳ ವಿವಿಧ ವೈಚಿತ್ರ್ಯಮಯ ವರ್ಣ ಮಯ ವಿನ್ಯಾಸ, ಭೂವ್ಯಾಕಾಶಗಳ ಮಧ್ಯೆ ಆ ದೂರದ ದಿಗಂತ ಪಂಕ್ತಿಯ ಮಾಯಾರೇಖೆ, ಮೈಲುತುತ್ತಿನ ಮರಳಿನ ರಾಶಿಗಳಂತೆ ತೋರುವ ಆ ಸುದೂರ ಗಿರಿಶಿಖರತರಂಗಗಳ ನೀಲ ಲೀಲೆ—ಇವು ಗಳನ್ನು ನೆನೆದರೆ ತನುವಿನಲ್ಲಿ ಮಿಂಚಿನ ಹೊನಲು ಹರಿದಂತಾಗಿ ವಿಕಂಪಿ ಸುತ್ತದೆ; ಮನವು ಭಾವಾವೇಗದಿಂದ ಮೈಮರೆಯುತ್ತದೆ. ಯಾವ

ತೀರ್ಥಸ್ನಾನದಿಂದ ಹೀಗಾಗುತ್ತದೆ? ಯಾವ ಪುಣ್ಯಕ್ಷೇತ್ರಯಾತ್ರೆಯಿಂದ ಹೀಗಾಗುತ್ತದೆ?

'ಚಿತ್ರ'ಗಳಿಗಾಗಿ ಬರೆಯುವ ಮುನ್ನುಡಿಯು 'ಚಿತ್ರ'ಗಳಂತೆಯೇ ಶಿಥಿಲವಾಗಿದ್ದರೇನಂತೆ? ಕವಿಶೈಲ ಸಮಲುಕಲ್ಲುಗಳ ಮಾತೆತ್ತಿಯಾಯಿತು ಅವುಗಳ ವಿಚಾರವಾಗಿ ನಿಮಗೆರಡು ಮಾತು ಹೇಳಿಯೇ ಬಿಡುತ್ತೇನೆ. ನೀವು "ಬೇಡ, ಮುನ್ನುಡಿಯಲ್ಲಿ ಹರಟೆಯು ಲಕ್ಷಣವಲ್ಲ, ನಮಗೆ ಅದನ್ನೆಲ್ಲ ಕೇಳಲು ಇಷ್ಟವಿಲ್ಲ, ಎಂದು ಕೂಗಿಕೊಂಡರೂ ನಾನು ಬೇರೆ ಬಿಡುವಂತಿಲ್ಲ! ಹೇಳಲೇ ಬೇಕು! ನನಗೇನೋ ಹೇಳಬೇಕೆನ್ನುವ ಹುಚ್ಚು ಹಿಡಿದಿದೆ! ಕೇಳುವ ಹುಚ್ಚಿದ್ದವರು ಕೇಳಲಿ! ಉಳಿದವರು ಪುಸ್ತಕವನ್ನಾಚೆಗೆ ಬಿಸಾಡಲಿ!

ನಮ್ಮ ಮನೆಯು ಪರ್ವತಾರಣ್ಯಗಳ ತೊಡೆಯ ಮೇಲೆ ಕೂತಿದೆ, ಎಂದು ಮೊದಲಾದ ಅನೇಕ ವಿಚಾರಗಳನ್ನು ನೀವು 'ಚಿತ್ರ'ಗಳಿಂದ ತಿಳಿಯುತ್ತೀರಿ. ಮನೆಯ ತೆಂಕಣ ದಿಕ್ಕಿಗೆ, ಮನೆಗೆ ಮುಟ್ಟಿಕೊಂಡೇ ಏರಿಏರಿ ಹೋಗುವ ಬೆಟ್ಟದೋರೆಯಿದೆ. ಐದು ಹತ್ತು ನಿಮಿಷಗಳಲ್ಲಿಯೇ ಅದರ ನೆತ್ತಿಗೆ ಹೋಗಬಹುದು. ನೆತ್ತಿಯಲ್ಲಿ ವಿಶಾಲವಾದ ಬಂಡೆಗಳಿದ್ದು ಸುತ್ತಲೂ ಸ್ವಲ್ಪ ಬಯಲಾಗಿ ದೂರದ ದೃಶ್ಯಗಳನ್ನು ನೋಡಲು ಅನುಕೂಲವಾಗಿದೆ. ಮಲೆನಾಡಿನ ಪರ್ವತಗಳಲ್ಲಿ ಅಂತಹ ಸ್ಥಾನಗಳು ಅಪೂರ್ವ. ಎಲ್ಲಿ ನೋಡಿದರೂ ಮಹಾರಣ್ಯಗಳೇ ತುಂಬಿರುವುದರಿಂದ ಶಿಖರಗಳಲ್ಲಿ ಬಂಡೆಗಳಿದ್ದು ಬಯಲಾಗಿರುವುದೇ ಕಷ್ಟ! ಅದರಲ್ಲಿಯೂ ನಮ್ಮ ಮನೆಯಲ್ಲಿರುವಂತೆ ಐದು ಹತ್ತು ನಿಮಿಷಗಳಲ್ಲಿಯೇ ಶಿಖರವನ್ನು ಸೇರುವಷ್ಟು ಸಮೀಪದಲ್ಲಿ ಅಂತಹ ಶೈಲಸ್ಥಾನಗಳು ಮತ್ತೆಲ್ಲಿಯೂ ಇಲ್ಲವೆಂದೇ ಹೇಳಬೇಕು. ನಾನಂತೂ ನೋಡಿಲ್ಲ. ಆ ಸ್ಥಳಕ್ಕೆ 'ಕವಿಶೈಲ' ಎಂದು ನಾಮಕರಣವಾದುದು ಇತ್ತೀಚಿನ ಸಂಗತಿ. ಹೆಸರು ಹೊಸದಾದರೂ ಜಾಗ ಹೊಸದಲ್ಲ. ತಲೆತಲೆಯಾಂತರದಿಂದಲೂ ಆ ಕವಿಶೈಲವೂ ಅದರ ಸುತ್ತಣ ಮನೋಹರ ದೃಶ್ಯಗಳೂ ಸದಸ್ಯ ನಿರಪೇಕ್ಷಣೀಯವಾದ ಧೀರ ಗಾಂಭೀರ್ಯದಿಂದಲೂ ಕರುಣಾಪೂರ್ಣ ಔದಾಸೀನ್ಯದಿಂದಲೂ ಅಲ್ಲಿಯೇ ಇರುತ್ತವೆ. ಅದರ

ಮುಖಾಂತರ ಜನಗಳು ತಿರುಗಾಡಿಯೂ ಆಡಿದ್ದಾರೆ. ಏಕೆಂದರೆ ಕವಿಶೈಲದ ಪಾರ್ಗವಾಗಿ ಕಡೆಮಕ್ಕಿ ಮೊದಲಾದ ಹಳ್ಳಿಗಳಿಗೆ ಹೋಗುವ ಒಂದು ಕಾಲುಹಾದಿಯಿದೆ. ಆದರೆ ಯಾರಿಗೂ ಆ ಸ್ಥಾನದ ಮಹತ್ತು ಬೃಹತ್ತು ಭವ್ಯತೆ ಸೌಂದರ್ಯ ಸುಖಶಾಂತಿಗಳ ಪರಿಚಯವಾಗಿರಲಿಲ್ಲ. ಸಿಜವಾದ ಯೋಗ್ಯತೆಯ ಪರಿಚಯವಾಗು ವುದಕ್ಕೂ ಒಂದು ಯೋಗ್ಯತೆ ಬೇಕು. ಕಲೆಯ ಕಣ್ಣಿರದವರಿಗೆ ಕವಿ ಶೈಲವು ಕಲ್ಲುಕಾಡು, ಕಲಾವಂತನಿಗೆ ಅದು ಸಗ್ಗವೀಡು. ಮಲೆ ನಾಡಿನಲ್ಲಿ ಅನೇಕರಿಗೆ ಕಲಾ ಸಂಸ್ಕೃತಿಯ ಅಭಾವದಿಂದ ತಮ್ಮ ನಾಡಿನ ಅಂದ ಚಂದ ಮಹಿಮೆ ಹಿರಿಮೆಗಳೇ ತಿಳಿದಿಲ್ಲ. ಆದರೆ ತಿಳಿ ಯುವ ಶಕ್ತಿಯಿದೆ ಎಂಬುದು ಈಚೀಚೆಗೆ ಗೊತ್ತಾಗುತ್ತಿದೆ. "ಕಾಡಿ ನಲ್ಲಿ ಕಳೆದ ಒಂದಿರುಳು" ಎಂಬ 'ಚಿತ್ರ'ದಲ್ಲಿ ಕೊನೆಯಭಾಗದಲ್ಲಿ ಒಂದು ಸ್ವರ್ಗೀಯ ದೃಶ್ಯದ ವರ್ಣನೆಯಿದೆ. ಅದು ಕವಿಶೈಲದಿಂದ ಅರುಣೋದಯ ಸಮಯದಲ್ಲಿ ನಿಂತು ನೋಡಿದ ದೃಶ್ಯ. ಆಗ ಆ ಸ್ಥಳಕ್ಕೆ ಹೆಸರೂ ವ್ಯಕ್ತಿತ್ವವೂ ಇನ್ನೂ ಲಭಿಸಿರಲಿಲ್ಲವಾಗಿ, ಅಲ್ಲಿ ಅದನ್ನು ಹೇಳಿಲ್ಲ. ವಾಚಕರು ಅದನ್ನು ಓದಿ ಇಲ್ಲಿಗೆ ಹೊಂದಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಕವಿಶೈಲವು ಪಶ್ಚಿಮದಿಕ್ಕಿಗೆ ಮುಖ ಹಾಕಿಕೊಂಡಿದೆ. ಪೂರ್ವ ದಿಕ್ಕಿನಲ್ಲಿ ಎತ್ತರವಾದ ಬೆಟ್ಟಗಾಡುಗಳು ಹಬ್ಬಿರುವುದರಿಂದ ಉಳಿದ ದಿಕ್ಕುಗಳಲ್ಲಿ ಸಮಗೆ ಗೋಚರವಾಗುವಂತೆ ದೂರದೃಶ್ಯಗಳು ಕಾಣು ವುದಿಲ್ಲ. ಆದ್ದರಿಂದ ಅಲ್ಲಿಗೆ ಸೂರ್ಯೋದಯಕ್ಕಿಂತಲೂ ಸೂರ್ಯಾಸ್ತವೇ ಸಹಸ್ರಪಾಲು ಅತಿಶಯವಾಗಿ ತೋರುತ್ತದೆ. ನಾವು ಸಾಧಾರಣ ವಾಗಿ ಸಂಜೆಯ ಹೊತ್ತಿನಲ್ಲಿಯೇ ಅಲ್ಲಿಗೆ ಹೋಗುವುದು. ಕವಿಶೈಲ ವನ್ನು ನೆನೆದರೆ ನೂರಾರು ಮಧುರ ಚಿತ್ರಗಳು ಅನುಭವಗಳು ವ್ಯಕ್ತಿ ಗಳು ಸನ್ನಿವೇಶಗಳು ಮನಸ್ಸಿಗೆ ಬಂದು ಅದನ್ನು ಇನ್ನೂ ಹೆಚ್ಚಾಗಿ ಪ್ರೀತಿಪಾತ್ರವಾಗುವಂತೆ ಮಾಡುತ್ತವೆ. ಒಂದೆರಡು ಫರ್ಲಾಂಗು ಗಳಷ್ಟು ವಿಸ್ತಾರವಾಗಿ ಹಬ್ಬಿರುವ ಆ ಬಂಡೆಯಲ್ಲಿ ಒಂದು ಕಡೆ ದಪ್ಪ ಅಕ್ಷರಗಳಿಂದ "ಕವಿಶೈಲ" ಎಂಬ ಹೆಸರು ಖಚಿತವಾಗಿದೆ.

ಇನ್ನೊಂದು ಕಡೆ 'ಅನಿರ್ವಚನೀಯ ಮೂರ್ತಿ' ಎಂಬ ಚಿತ್ರವಿ
ಮತ್ತೊಂದೆಡೆ ಏಸುಕಿಸ್ತನನ್ನು ಶಿಲುಬೆಗೆ ಹಾಕಿದಂತೆ ಚಿತ್ರವಿ
ಅಲ್ಲಿ ಖಚಿತವಾದ ಹೆಸರುಗಳೆಷ್ಟು! ಅಲ್ಲಿಗೆ ಬಂದವರೆಲ್ಲರೂ ತವ
ಹೆಸರುಗಳನ್ನು ಕೆತ್ತದೆ ಬರುವುದಿಲ್ಲ. ನನ್ನ ಬಯಲು ಸೀಮೆಯ
ಮಿತ್ರರೂ ಅಲ್ಲಿಗೆ ಬಂದಾಗ ಹೆಸರುಗಳನ್ನು ಕೆತ್ತಿ ಸ್ಮಾರಕಸ್ತೂ
ಗಳನ್ನು ನೆಟ್ಟು ಬಂದಿರುತ್ತಾರೆ. ಅಲ್ಲಿ ಹೆಸರು ಕೆತ್ತಿದ ಪ್ರೀತಿಯ
ಬಂಧುಗಳಲ್ಲಿ ಕೆಲವರು ಸ್ವರ್ಗಸ್ಥರಾಗಿದ್ದಾರೆ. ಕೆಲವು ಮಿತ್ರರ
ದೂರದೂರ ದೇಶಗಳಲ್ಲಿದ್ದಾರೆ. ಒಬ್ಬರು ಅಮೇರಿಕಾದಲ್ಲಿದ್ದಾರೆ
ಅಲ್ಲಿ ಸಂಧ್ಯಾಕಾಲದಲ್ಲಿ ಎಂಥವನೂ ಧ್ಯಾನಶೀಲನಾಗದೆ ಹಿಂತಿರುಗ
ವುದಿಲ್ಲ. ಅನೇಕ ಅನುಭವಗಳಿವೆ. ಅವುಗಳನ್ನು ಇನ್ನಾವಾಗಲಾದರು
ಹೇಳುತ್ತೇನೆ. ಉದಾಹರಣೆಗೆ ಮಾತ್ರ ಒಂದಿರಲಿ.

ಒಂದು ದಿನ ಸಂಜೆ. ಸೂರ್ಯನು ಮುಳುಗಿದ್ದನು. ಮುಂಗಾರ
ಮೋಡಗಳು ಆಕಾಶದಲ್ಲಿ ಅಂಗೈಯಗಲದ ಜಾಗವನ್ನೂ ಉಳಿಸ
ಮುತ್ತಿದ್ದವು. ಶ್ರೀನಿ, ವಿಜಯ, ಎಂಕ್ಟು, ನಾನು, ನಾಲ್ವರೂ ಕ
ಶೈಲಕ್ಕೆ ಹೊರಟೆವು. ನಮಗೆ ಮಳೆ ಬರುವುದೆಂದು ಭಯ. ಆದರ
ಕವಿಶೈಲದ ಮೋಹ. ಮೋಹವು ಭಯವನ್ನು ಗೆದ್ದುದರಿಂದ ಬೆಟ್ಟವೇ
ದೆವು. ಅಂದು ನಮಗಾದ ಅನುಭವವು ಚಿರಸ್ಮರಣೀಯವಾದುದು
ಧಾರ್ಮಿಕವಾದುದು, ಅಮೃತವಾದುದು, ಎಷ್ಟು ಮಾತುಗಳನ್ನು ಹಾ
ದರೂ ಸಾಲದು ಎನ್ನಿಸುವಂಥದು!

ಬೆಟ್ಟವೇರಿದೆವು! ಏರುತ್ತ ಏರುತ್ತ 'ಭೂತದ ಸಿಲೇಟು' ಇರ
ವಲ್ಲಿಗೆ ಹೋಗುತ್ತಲೇ ನನಗೆ ಏನೋ ಒಂದು ಅಸಾಧಾರಣತೆಯ
ಅನುಭವವಾಗತೊಡಗಿತು. ಹೊಸಮಳೆಯ ಮುದ್ದುಮುತ್ತಿಗೆ ಪು
ಕಿತಳಾಗಿದ್ದ ಶ್ಯಾಮಲಧಾರಿಣಿಯ ಮೇಲೆ ಅದ್ಭುತವಾದ ಒಂದ
ಗೈರಿಕ ಕಾಂತಿಯು ಹಬ್ಬಿತ್ತು. ಎಲ್ಲರೂ ಬೆಕ್ಕಸಗೊಂಡು ನೋ
ದುದರಿಂದ ಎಲ್ಲರ ಮನದಲ್ಲಿಯೂ ಅದೊಂದು ವಿಶೇಷವೆಂದು ತೋರಿ
ಬೇಕು. ಆಶ್ಚರ್ಯ ಆನಂದಗಳನ್ನು ಸೂಚಿಸುವ ಒಂದೆರಡು ಅನುಕರ
ಶಬ್ದಗಳನ್ನು ಉಚ್ಚರಿಸುತ್ತ ಬೇಗಬೇಗನೆ ಮುಂದುವರಿದೆವು. ಮುಂದ

ವರಿದಂತೆಲ್ಲಾ ಆ ಅದ್ಭುತ ಜ್ಯೋತಿಯು ನಾಡನ್ನೂ ನಮ್ಮೆಲ್ಲರ ಹೃದಯಗಳನ್ನೂ ತುಂಬಿತು. ಅಂತೂ ಕವಿಶೈಲವನ್ನು ಸೇರಿ ಬಂಡೆಯ ಮೇಲೆ ಕುಳಿತೆವು. ಸುಮ್ಮನೆ ನೋಡಿದೆವು.

ಸಮಸ್ತ ಆಕಾಶವನ್ನೂ ಸುತ್ತಿಮುತ್ತಿದ್ದ ಕಾರ್ಗಾಲದ ಕರ್ಮುಗಿಲು ಪಡುವಣದೆಸೆಯಲ್ಲಿ ಮಾತ್ರ ಹತ್ತು ಹದಿನೈದು ಮಾರು ಅಗಲಕ್ಕೆ ಹಬ್ಬಿರಲಿಲ್ಲ. ಅದೊಂದು ಮಹಾಮೇಘಗವಾಕ್ಷದಂತಿತ್ತು. ಸೂರ್ಯನು ಅಸ್ತನಾಗಿದ್ದುದರಿಂದ ಕಿರಣಗಳಿಲ್ಲದ ಸಂಧ್ಯಾಕಾಂತಿಯು ವಿಪುಲ ಪ್ರವಾಹವು ಆ ಮಹಾಗವಾಕ್ಷದಿಂದ ತುಳುಕಿ ತೂರಿ ಪ್ರವಹಿಸಿ ಬಂದು ತರಂಗ ತರಂಗವಾದ ವಿಸ್ತಾರವಾದ ಗಿರಿವನ ಧರೆಯನ್ನು ಆಲಿಂಗಿಸಿತ್ತು. ಆ ಗೈರಿಕ ವರ್ಣದ ಜ್ಯೋತಿಯಲ್ಲಿ ಒಂದು ವಿಧವಾದ ಧಾರ್ಮಿಕತೆಯು ಪ್ರಸ್ಫುಟವಾಗಿತ್ತು. ಆ ದೀಪ್ತಿಯ ಜೊತೆಗೆ ಮೌನವೂ ಸೇರಿದ್ದುದರಿಂದ ಜಗತ್ತು ಗೈರಿಕವಸನಧಾರಿಯಾಗಿ ಧ್ಯಾನಸ್ಥನಾದ ಮಹಾತಪಸ್ವಿಯಂತೆ ಭವ್ಯವಾಗಿತ್ತು. ತೆಂಕಣ ದೆಸೆಯಲ್ಲಿ ಬಹುದೂರದಲ್ಲಿ ಪರ್ವತಶಿಖರಗಳಲ್ಲಿ ರಾಶಿರಾಶಿಯಾಗಿದ್ದ ಕರ್ಮುಗಿಲಿನಲ್ಲಿ ಬಳ್ಳಿಮಿಂಚು ನಾಗರಹಾವಿನ ನಾಲಗೆಯಂತೆ ಹೊಮ್ಮಿ ಚಿಮ್ಮಿ ಕಣ್ಮರೆಯಾಗುತ್ತಿತ್ತು. ನಾವು ಬಂಡೆಯ ಮೇಲೆ ಕುಳಿತು ಮಾತಿಲ್ಲದೆ ನೋಡಿದೆವು. ನೋಡುತ್ತಿದ್ದ ಹಾಗೆಯೇ ಮೇಘಗವಾಕ್ಷದೆಡೆಯ ಸಂಧ್ಯಾಗಗನವೇದಿಕೆಯಲ್ಲಿ ಲೋಕಮೋಹಕವಾದ ಅಸಂಖ್ಯ ವರ್ಣೋಪವರ್ಣಗಳ ಮೆರವಣಿಗೆಯು ಪ್ರಾರಂಭವಾಯಿತು. ಹಾಗೆಯೇ ನಮ್ಮ ಹೃದಯ ಮಂದಿರಗಳಲ್ಲಿ ಅಸಂಖ್ಯ ಭಾವೋಪಭಾವಗಳ ಮಹೋತ್ಸವವೂ ಪ್ರಾರಂಭವಾಯಿತು. ಆ ಸೌಂದರ್ಯ ಸಮುದ್ರದಲ್ಲಿ ನಾವೆಲ್ಲರೂ ತೆರೆತೆರೆಗಳಾಗಿ ಅಶರೀರಿಗಳಾಗಿ ವಿಶ್ವವಿಲೀನರಾದೆವು. ನನ್ನ ಕಣ್ಣೆವೆಗಳು ಅನೈಚ್ಛಿಕವಾಗಿಯೇ ಮುಗುಳಿದುವು.. ........ಕಣ್ದೆರೆದಾಗ ಕತ್ತಲೆಯಾಗಿತ್ತು............ನಾವು ಕಂಡ ದೃಶ್ಯದ, ನಮಗಾದ ಅನುಭವದ ವಿಚಾರವಾಗಿ ಮಾತನಾಡುವುದಕ್ಕೂ ಬೆದರಿಕೆಯಾಗಿ ಬೇರೆಯ ವಿಷಯಗಳನ್ನು ಕುರಿತು ಸಂಭಾಷಿಸುತ್ತ ಮನೆಗೆ ಬಂದೆವು. ಆದರೂ ದಾರಿಯಲ್ಲಿ ಒಬ್ಬರ ಮುಖವನ್ನು ಒಬ್ಬರು ನೋಡಿದಾಗಲೆಲ್ಲ ನೋಟ

ವು ನಾವು ಕಂಡ ದರ್ಶನವನ್ನು ಕುರಿತೇ ನುಡಿಯುವಂತಿತ್ತು......

ಕವಿಶೈಲದಂತೆಯೇ ಅಥವಾ ಅದಕ್ಕಿಂತಲೂ ಒಂದು ಕೈ ಮೇಲಾಗಿದೆ ನವಿಲುಕಲ್ಲು. ಸುತ್ತಮುತ್ತಣ ಕಾಡುಗಳಲ್ಲಿರುವ ನವಿಲುಗಳು ಬಂದು ಆ ಶಿಲಾಶಿಖರದಲ್ಲಿ ವಿಹರಿಸುವುದರಿಂದ ಅದಕ್ಕೆ ಆ ಹೆಸರು ಬಂದಿದೆ. ಆ ಶಿಖರ ಸಮಸ್ತವೂ ಒಂದು ಅಖಂಡವಾದ ಬಂಡೆಯಾಗಿದೆ. ಅದರ ಮೇಲೆ ನಿಂತು ನೋಡಿದರೆ ಸುತ್ತಲೂ ನಾಲ್ದೆಸೆಯಲ್ಲಿಯೂ ತರಂಗತರಂಗವಾಗಿ ಒಂದರೊಡನೊಂದು ಸ್ಪರ್ಧಿಸುತ್ತಿವೆಯೋ ಎಂಬಂತೆ ದಿಗಂತವಿಶ್ರಾಂತವಾಗಿ ಗಗನಚುಂಬಿಗಳಾಗಿ ಹಬ್ಬಿರುವ ವನಪರ್ವತಶ್ರೇಣಿಗಳ ಚಕ್ರಾಕಾರವಾದ ಭವ್ಯ ದೃಶ್ಯವು ಹೃದಯಂಗಮವಾಗಿ ಮನೋಹರವಾಗಿ ದೃಗ್ಗೋಚರವಾಗುತ್ತದೆ. ದೂರದ ಗಿರಿಪಂಕ್ತಿಗಳಂತೂ ಮಾಸಲು ಮಾಸಲಾಗಿ ನೀಲಮೇಘಗಳಂತೆ ಆಕಾಶದ ವಸ್ತುಗಳಾಗಿ ತೋರುತ್ತವೆ. ಹತ್ತಿರದಲ್ಲಿ ಬಹುದೂರ ಕೆಳಗಡೆ ಅಲ್ಲಲ್ಲಿ ಕಣಿವೆಗಳೂ ಗದ್ದೆ ತೋಟಗಳೂ ಮನೆಗಳೂ ಕಾಣುತ್ತವೆ. ಪೂರ್ವದಿಕ್ಕಿನಲ್ಲಿ ಹಸುರುಕಾಡುಗಳ ನಡುವೆ ಕೊಂಕಿ ಹರಿವ ತುಂಗಾನದಿಯು ಸಲಿಲಸೈಕತ ಶ್ವೇತರೇಖಾವಿನ್ಯಾಸವು ಸುಮನೋಹರವಾಗಿ ಕಂಗೊಳಿಸುತ್ತದೆ. ಮೇಲಿನ ವರ್ಣನೆಯು ನವಿಲುಕಲ್ಲಿನಲ್ಲಿ ಸದಾ ಸಾಮಾನ್ಯವಾಗಿ ತೋರುವ ದೃಶ್ಯದ್ದಾಯಿತು. ಆದರೆ ವಸಂತ ಪ್ರಭಾತದ ನವಿಲುಕಲ್ಲೇ ಬೇರೆ! ಅದನ್ನು ನೋಡಿ ಅನುಭವಿಸಿದಲ್ಲದೆ ಅದರ ಸೌಂದರ್ಯ ಮಹಿಮೆಗಳು ತಿಳಿಯುವುದಿಲ್ಲ. ನಾನಂತೂ ಅದನ್ನು ನೋಡಿ ಸೋತು ಶರಣಾಗಿದ್ದೇನೆ. ಆ ಸ್ವರ್ಗೀಯ ದೃಶ್ಯದ ಮಹಾವಿಗ್ರಹವು ನನ್ನ ಮನೋಮಂದಿರದಲ್ಲಿ ಚಿರವಾಗಿ ಸ್ಥಾಪಿತವಾಗಿದೆ. ಅದಕ್ಕಲ್ಲಿ ದಿನದಿನವೂ ಆರಾಧನೆ ನಡೆಯುತ್ತಿದೆ.

ನಮ್ಮ ಮನೆಗೆ ಕೆಲವು ಜನ ಬಯಲು ಸೀಮೆಯ ಮಿತ್ರರು ಬಿಜಯ ಮಾಡಿದ್ದರು. ನಾವೆಲ್ಲರೂ ಸೇರಿ ನಮ್ಮ ನೆಂಟರ ಮನೆಯೂ ನೆಂಟರಿಗಿಂತ ಹೆಚ್ಚಾಗಿ ಮಿತ್ರರ ಮನೆಯೂ ಆಗಿರುವ ಇಂಗ್ಲಾದಿಗೆ ಹೋಗಿ ಉಳಿದೆವು. ಇಂಗ್ಲಾದಿಗೆ ನವಿಲುಕಲ್ಲು ಎರಡೂವರೆ ಮೈಲಿ. ಮರುದಿನ ಬೆಳಿಗ್ಗೆ ನವಿಲುಕಲ್ಲಿಗೂ ಅಲ್ಲಿಂದ ಸಿಬ್ಬಲಗುಡ್ಡೆಗೂ

ಹೋಗಲು ನಿಶ್ಚಯ ಮಾಡಿದೆವು. ಎಲ್ಲರೂ ಬೆಳಿಗ್ಗೆ ನಾಲ್ಕು ಗಂಟೆಗೆ ಏಳಬೇಕೆಂದು ನಾನು ಹುಕುಂ ಮಾಡಿದೆ. ಅವರಲ್ಲಿ ಕೆಲವರು ಗೊಣಗಿದರು. ಆದರೆ ನಾನು ನಿರ್ದಯನಾಗಿ ಮೂರೂ ಮುಕ್ಕಾಲು ಗಂಟೆಗೇ ಎಲ್ಲರನ್ನೂ ಎಬ್ಬಿಸಿದೆ. (ನಾನು ಅಷ್ಟು ಹೊತ್ತಿಗೆ ಎದ್ದುದೂ ಆ ಮನೆಯ ಯಜಮಾನರೂ ನನ್ನ ಗೆಳೆಯರೂ ಆದ ವೆಂ—ರವರ ಸಹಾಯದಿಂದ!) ಅಂತೂ ಎಲ್ಲರೂ ಮನಸ್ಸಿಲ್ಲದ ಮನಸ್ಸಿನಿಂದ ಥೂಗುಟ್ಟುತ್ತ ಶಪಿಸುತ್ತ ಎದ್ದರು. ಮುಖ ತೊಳೆದು ಕಾಫಿ ತಿಂಡಿ ಪೂರೈಸಿಕೊಂಡು ಹೊರಟೆವು. ಇನ್ನೂ ಕತ್ತಲೆಯಾಗಿಯೇ ಇತ್ತು. ಕಾಡಿನ ಕುಟಿಲ ಪಥಗಳಲ್ಲಿ ಮುಗ್ಗರಿಸುತ್ತ ಪ್ರತ್ಯೂಷೆಯ ತಂಗಾಳಿಯನ್ನು ಸೇವಿಸುತ್ತ, ಇನ್ನೇನು ಎಚ್ಚರಲಿರುವ ಮೌನದ ಗಾಂಭೀರ್ಯವನ್ನು ಅನುಭವಿಸುತ್ತ ಮಡಿವಾಳಗಳ ಉಲಿಯನ್ನು ಆಲಿಸುತ್ತ ಸುಮಾರು ಐದೂವರೆ ಐದೂ ಮುಕ್ಕಾಲು ಗಂಟೆಗೆ ನವಿಲುಕಲ್ಲನ್ನು ಸೇರಿದೆವು. ಆ ಜಗನ್ಮೋಹನ ದೃಶ್ಯ ಸೀಮೆಯು ಅನಂತವಾಗಿ ಅಪಾರವಾಗಿ ಅಸೀಮವಾಗಿ ಅದ್ಭುತವಾಗಿ ನಮ್ಮೆದುರು ಪ್ರಸರಿಸಿತ್ತು! ನಾಡಿಗಳಲ್ಲಿ ರಕ್ತವು ವೇಗವಾಗಿ ಬಿಸಿಬಿಸಿಯಾಗಿ ಹರಿಯತೊಡಗಿತು. ಹೃದಯಶ್ವಾಸಕೋಶಗಳ ಕರ್ಮವು ಚುರುಕಾಯಿತು. ಆನಂದಾವೇಶಗಳ ಭರದಲ್ಲಿ ಕಣ್ಣುಗಳರಳಿದುವು. ಮುಖವು ಅಂತರಂಗದ ಭಾವಗಳನ್ನು ಪ್ರತಿಬಿಂಬಿಸಿ ಉಜ್ವಲವಾಯಿತು. ಮಾತು ಮೂರ್ಛೆ ಹೋಯಿತು!

ನವಿಲುಕಲ್ಲಿಗೆ ಪೂರ್ವಾಭಿಮುಖವಾಗಿದ್ದ ಗಿರಿಕಂದರಗಳಲ್ಲಿ ಹಿಂಜಿ ಹರಡಿದ ಬೂರುಗದರಳೆಯ ರಾಶಿಯಂತೆ ಮಂಜು ತುಂಬಿಕೊಂಡು ಸ್ವಚ್ಛತರ ಧವಳಫೇನದ ವಿಸ್ತಾರವಾದ ಮಹಾಸಮುದ್ರದಂತೆ ತರಂಗತರಂಗವಾಗಿ ಆವರ್ತಗರ್ತಗಳಾಗಿ ಸುಳಿಹೊನಲುಗಳಾಗಿ ಶೀಕರನೀಹಾರಗಳಾಗಿ ಚೇತೋಹಾರಿಯಾಗಿ ರಾರಾಜಿಸಿತ್ತು. ದೃಷ್ಟಿಸೀಮಾ ಪರ್ಯಂತ ದಿಗಂತಪರ್ಯಂತ ಗಗನತಟಾಕ್ರಾಂತವಾಗಿ ಹಬ್ಬಿದ್ದ ಆ ನೊರೆ ನೊರೆ ನೊರೆ ಬೆಳ್ನೊರೆಯ ಹೆಗ್ಗಡಲು, ಇರುಳು ಆಕಾಶದಲ್ಲಿ ಮಲಗಲು ತಾವಿಲ್ಲದೆ ಭೂಮಿಗೆ ಇಳಿದುಬಂದು ಕಣಿವೆ ಕಣಿವೆಗಳಲ್ಲಿ

ಹರಿದು ನಿದ್ದೆಗೈದ ಬೆಳ್ಮುಗಿಲುಗಳು ಬೆಳಗಾದರೂ ಆಲಸ್ಯದಿಂದ ಮೇಲೇಳಲಾರದೆ ಇರುವುವೋ ಎಂಬಂತೆ ತೋರುತ್ತಿತ್ತು. ನಮ್ಮ ಬುದ್ಧಿಯು ಅದು ಕಡಲಲ್ಲವೆಂದು ಉಪದೇಶವಾಡುತ್ತಿದ್ದರೂ ಮನಸ್ಸಿಗೇಕೋ ಆ ಭ್ರಾಂತಿ ತಪ್ಪಲಿಲ್ಲ. ನೊರೆಯ ಹಿರಿ ಕಡಲಿನಲ್ಲಿ ಕಣಿವೆ ಕಾಡು ಹೊಳೆ ಮನೆ ತೋಟ ಎಲ್ಲವೂ ಮುಚ್ಚಿಹೋಗಿದ್ದುವು. ದೂರ ದೂರ ನಾವು ನಿಂತಿದ್ದ ನವಿಲುಕಲ್ಲಿನಂತೆ ಎತ್ತರವಾಗಿದ್ದ ಬೆಟ್ಟದುದಿಗಳು ಮಾತ್ರ ಫೇನಸಾಗರದಲ್ಲಿ ತಮ್ಮ ಶ್ಯಾಮಲ ಶಿರಗಳನ್ನು ಮೇಲೆತ್ತಿ ದ್ವೀಪಗಳಂತೆ ಈಜಾಡುತ್ತಿದ್ದುವು. ಮಂಜಿನ ಕಡಲು ಕೆಲವೆಡೆ ಬೆಟ್ಟದಿರುಬುಗಳಲ್ಲಿ ತೂರಿಹೋಗಿ ಕೊಲ್ಲಿ ಖಾರಿಗಳಾಗಿತ್ತು. ಆ ಮಂಜಿನ ಇಂದ್ರಜಾಲಗಳನ್ನು ಅವಲೋಕಿಸುತ್ತ ನಿಂತಿದ್ದ ಹಾಗೆಯೇ ಬಹು ದೂರದ ಪೂರ್ವದಿಗಂತದಲ್ಲಿ ಅರುಣಕಾಂತಿಯು ತಲೆದೋರಿ ಪರ್ವತ ಶಿಖರ ಪಂಕ್ತಿಗಳಿಂದಾದ ದಿಗಂತರೇಖೆಯು ಸ್ಪಷ್ಟವಾಯಿತು. ನಾವೆಲ್ಲರೂ ಮಾತಾಡದೆ ಎವೆಯಿಕ್ಕದೆ ಉತ್ಕಂಠಭಾವದಿಂದ ನಿಂತು ಭಗವಾನ್ ಸೂರ್ಯದೇವನ ಪ್ರಥಮದರ್ಶನದ ಮಹೋತ್ಸವವನ್ನೇ ಎದುರು ನೋಡುತ್ತಿದ್ದೆವು. ಕೆಂಬೆಳಕು ಮತ್ತಿನಿತು ಉದ್ದೀಪನವಾಗಿ ನೋಡುತ್ತಿರೆಯಿರೆ ದಿವಾಕರನ ರಕ್ತಾಕ್ತ ವಿಶಾಲ ಬಿಂಬದ ನೇಮಿರೇಖೆಯು ಸುದೂರದೂರದ ಪರ್ವತಶಿಖರಗಳ ಮೇಲೆ ಹಠಾತ್ತಾಗಿ ಪ್ರತ್ಯಕ್ಷವಾಯಿತು. ನಮ್ಮೆದೆಗಳಲ್ಲಿ ನೆತ್ತರು ಚಿಮ್ಮಿತು, ಮನದಲ್ಲಿ ಭಾವವುಕ್ಕಿತು. ತಳತಳಿಸುವ ಮಿಂಚಿನ ವಕ್ರರೇಖೆಯಂತೆ ಹೊರಮೂಡಿದ ದಿನೇಶನು ನೋಡೆನೋಡೆ ಕುಂಕುಮದಲ್ಲಿ ಮಿಂದ ಮಿಂಚಿನುಂಡೆಯಾದನು. ಆತನ ಪೂರ್ಣ ಬಿಂಬದಿಂದ ಸೂಸಿದ ಪ್ರಭಾತ ಕಾಂತಿಯು ಪರ್ವತಶೃಂಗಗಳ ಮೇಲೆಯೂ ಮಂಜಿನ ಸಮುದ್ರದ ಮೇಲೆಯೂ ಬಿದ್ದು ಮನೋಹರವಾಯಿತು. ತಂಗಾಳಿಯೂ ಹಕ್ಕಿಗಳ ಗಾನವೂ ಸೊಬಗಿನ ಸಂಭ್ರಮದಲ್ಲಿ ಭಾಗಿಗಳಾದುವು. ರವಿಕಿರಣಗಳ ಉಷ್ಣಸ್ಪರ್ಶದಿಂದ ನಿದ್ದೆ ತಿಳಿದು ಎಚ್ಚತ್ತ ಮಂಜು ಮುಗಿಲು ಮುಗಿಲಾಗಿ ಗಗನದೆಡೆಗೆ ಒಯ್ಯನೊಯ್ಯನೆ ಏರಲಾರಂಭಿಸಿತು........ ನಾವೆಲ್ಲರೂ ಕಣ್ದಣಿಯೆ ನೋಡಿ, ಮನದಣಿಯೆ ಸವಿದು, ಮನಸ್ಸಿಲ್ಲದ

ಮನಸ್ಸಿನಿಂದ ನವಿಲುಕಲ್ಲನ್ನು ಬೀಳ್ಕೊಂಡು, ಅಲ್ಲಿಂದ ಎರಡೂವರೆ ಮೂರು ಮೈಲಿಗಳ ದೂರದಲ್ಲಿರುವ 'ಸಿಬ್ಬಲುಗುಡ್ಡೆ'ಗೆ ಹೋಗಿ ಮೀನುಗಳಿಗೆ ತಿಂಡಿ ಹಾಕಿ, ತುಂಗೆಯಲ್ಲಿ ಮಿಂದು ಸುಮಾರು ಹನ್ನೆರಡು ಗಂಟೆಯ ಹೊತ್ತಿಗೆ ಮನೆಗೆ 'ಸುಸ್ತಾಗಿ' ಹಿಂತಿರುಗಿದೆವು. ಅಂದಿನ ಅನುಭವವು ಎದೆಯ ನಾಲಗೆಯಲ್ಲಿ ಎಂದಿಗೂ ಸವೆದುಹೋಗದ ಪೆಪ್ಪರಮೆಂಟಾಗಿದೆ! ಹೃದಯಮಂದಿರದಲ್ಲಿ ಸರ್ವದಾ ಆರಾಧಿತ ಮಹಾವಿಗ್ರಹವಾಗಿದೆ!

ಮಲೆನಾಡನ್ನು ಬಿಟ್ಟುಬಂದು ಬಯಲುಸೀಮೆಯಲ್ಲಿರುವಾಗ ನನ್ನ ಮನಸ್ಸು ಆಗಾಗ್ಗೆ ತವರುನಾಡಿನ ಚೆಲುವು ಗೆಲುವುಗಳನ್ನೂ ದೃಶ್ಯಗಳನ್ನೂ ವ್ಯಕ್ತಿಗಳನ್ನೂ ಸನ್ನಿವೇಶಗಳನ್ನೂ ನೆನೆದು ಸುಖಪಡುತ್ತದೆ. ನನ್ನ ಆಪ್ತಮಿತ್ರರಿಗೆ ಅವುಗಳನ್ನು ಹೇಳಿ ನಲಿಯುತ್ತದೆ. ಅದರ ಪರಿಣಾಮವೇ ಈ "ಮಲೆನಾಡಿನ ಚಿತ್ರಗಳು."

ಒಂದು ದಿನ ಸಾಯಂಕಾಲ ನಾನು ಶ್ರೀಮಾನ್ ವೆಂಕಣ್ಣಯ್ಯನವರೊಡನೆ ಕುಕ್ಕನಹಳ್ಳಿಯ ಕೆರೆಯ ಮೇಲೆ ವಾಯುವಿಹಾರಕ್ಕಾಗಿ ಹೋಗಿದ್ದಾಗ ಯಾವುದೋ ಮಾತು ಬಂದು ಮಲೆನಾಡಿನ ಕೆಲವು ಅನುಭವಗಳನ್ನು ಹೇಳತೊಡಗಿದೆ. ಜೊತೆಯಲ್ಲಿ ತೀ. ನಂ. ಶ್ರೀ. ಡಿ. ಎಲ್. ನ ಮೊದಲಾದ ಮಿತ್ರರೂ ಇದ್ದರು. ನಾವೆಲ್ಲರೂ ಹುಲುಸಾಗಿ ಹಸುರು ಹೊಮ್ಮಿ ಬೈಗುಗೆಂಪಿನ ಬಿಸಿಲಿನಲ್ಲಿ ಸುಮನೋಹರವಾಗಿದ್ದ ಕೆರೆಯಂಚಿನ ಬಯಲಿನಲ್ಲಿ ಕುಳಿತಿದ್ದೆವು. ಮೆಲ್ಲೆಲರು ಸುಖದಾಯಕವಾಗಿ ತೀಡುತ್ತಿತ್ತು. ಬಹಳ ಹೊತ್ತು ಕತೆಹೇಳಿದೆ. ಅವರೂ ಸಾವಧಾನದಿಂದ ಅದಕ್ಕಿಂತಲೂ ಹೆಚ್ಚಾಗಿ ವಿಶ್ವಾಸದಿಂದ ಆಲಿಸಿದರು. ಎಲ್ಲ ಮುಗಿದ ಮೇಲೆ ವೆಂಕಣ್ಣಯ್ಯನವರು ಆ ಅನುಭವಗಳನ್ನು ಬರೆದರೆ ಚೆನ್ನಾಗಿರುತ್ತದೆ ಎಂದು ಸೂಚನೆ ಕೊಟ್ಟರು. ಚಿತ್ರಗಳನ್ನು "ಪ್ರಬುದ್ಧ ಕರ್ಣಾಟಕ"ದಲ್ಲಿ ಅಚ್ಚುಹಾಕಿಸಬಹುದೆಂದೂ ಉತ್ತೇಜನ ಕೊಟ್ಟರು. ನಾನು ಒಪ್ಪಿಕೊಂಡು ಕೆಲವು ಚಿತ್ರಗಳನ್ನು ಬರೆದು ಅವರಿಗೆ ಓದಿದೆ. "ನೀವು ಬಾಯಲ್ಲಿ ಹೇಳುತ್ತಿದ್ದಾಗ ಇದ್ದ ಸ್ವಾರಸ್ಯ ಈ ಚಿತ್ರಗಳಲ್ಲಿ ಇಲ್ಲ" ಎಂದರು. ನನಗೂ ಹಾಗೆಯೇ ತೋರಿತು. ಸಜೀವವಾದ

ವಾಣಿಯೂ ಮುಖನಯನ ಅಂಗಗಳ ಅಭಿನಯವೂ ಮಾಡುವ ಕೆಲಸ ವನ್ನು ನಿರ್ಜೀವವಾದ ಲೇಖಣಿಯು ಮಾಡಬಲ್ಲುದೆ? ಆದರೆ ಆಲಿಸು ವವರಲ್ಲಿ ವಿಶ್ವಾಸವಿದ್ದರೆ ಮೃತದಲ್ಲಿಯೂ ಶ್ವಾಸವಾಡುತ್ತದೆ.

ಮೈಸೂರು,
೧೯-೬-೩೩

ಕೆ. ವಿ. ಪುಟ್ಟಪ್ಪ.

# ಮಲೆನಾಡಿಗೆ ಬಾ

---

೧

ಮಲೆನಾಡಮ್ಮನ ಮಡಿಲಿನಲಿ,
ಕರ್ಮುಗಿಲೊಡಲಿನಲಿ,
ಮನೆಮಾಡಿರುವೆನು ಸಿಡಿಲಿನಲಿ,
ಮಿಂಚಿನ ಕಡಲಿನಲಿ!
ಬನಗಳ ಬೀಡು,
ಚೆಲ್ವಿನ ನಾಡು,
ಮೋಹನ ಭೀಷಣ ಮಲೆನಾಡು!

೨

ನೇಸರು ಮೂಡುವ ಪೆಂಪಿಹುದು,
ಮುಳುಗುವ ಸೊಂಪಿಹುದು,
ತಿಂಗಳ ಬೆಳಕಿನ ಕಾಂತಿಯಿದೆ,
ಇರುಳಿನ ಶಾಂತಿಯಿದೆ.
ಕೋಗಿಲೆಯಿಲ್ಲಿ,
ಲಾವುಗೆಯಿಲ್ಲಿ,
ಗಿಳಿಗಳ ನುಣ್ಚರವಿಹುದಿಲ್ಲಿ!

೩

ಮೊರೆಯುತ ಹರಿಯುವ ತೊರೆಯಿಹುದು,
ತುಂಬಿದ ಕೆರೆಯಿಹುದು;
ಹಾಡುತಲೇರಲು ಬೆಟ್ಟವಿದೆ,
ಬಣ್ಣಿಸೆ ಘಟ್ಟವಿದೆ.
ಬಿಸಿಲಿದೆ, ತಂಪಿದೆ,
ಹೂಗಳ ಕಂಪಿದೆ,
ಹಸುರಿನ, ಹಣ್ಣುಗಳಿಂಪಿನೆದೆ!

೪

ರನ್ನನು ಪಂಪನು ಬಹರಿಲ್ಲಿ!
ಶ್ರೀಗುರುವಿಹನಿಲ್ಲಿ!
ಮಿಲ್ಟನ್, ಷೆಲ್ಲಿ ಬಹರಿಲ್ಲಿ!
ಕವಿವರರಿಹರಿಲ್ಲಿ!
ಮುದ್ದಿನ ಹಳ್ಳಿ
ಈ ಕುಪ್ಪಳ್ಳಿ
ಬಾ, ಕಬ್ಬಿಗ ನಾನಿಹೆಸಿಲ್ಲಿ!

ಕೆ ವಿ ಪುಟ್ಟಪ್ಪ.

---

# ಹಾಸ್ಯದ ಚಟಾಕಿ

ನಮ್ಮ ಮನೆಯ ಮಹಡಿಯ ಮೇಲೆ ಮಲಗಿದ್ದೆವು. ನಾವು ಎದ್ದಾಗ ಆರು ಗಂಟೆಯಾಗಿತ್ತು. ಮೂಡಲಿನಲ್ಲಿ ಮುದ್ದುಬಿಸಿಲಿನ ಚೆಲುವೆ ಚಿಮ್ಮುತ್ತಿತ್ತು. ನಾನು ಹೇಳಿದುದರ ಅರ್ಥವು ನಿಮಗೆ ಚೆನ್ನಾಗಿ ತಿಳಿಯಬೇಕಾದರೆ, ಚಿತ್ರವು ಕಣ್ಣಿಗೆ ಕಟ್ಟಿ ನಿಲ್ಲಬೇಕಾದರೆ, ಇನ್ನೆರಡು ಮಾತುಗಳನ್ನು ಹೆಚ್ಚಾಗಿ ಹೇಳಿಬಿಡುತ್ತೇನೆ. ಚೆನ್ನಾಗಿ ಕಿವಿಗೊಟ್ಟು ಕೇಳಿಬಿಡಿ. ನಾನು ನಿಮ್ಮ ಕಣ್ಣಿಗೆ ಕಟ್ಟುವ ಚಿತ್ರವನ್ನು ಮಾತ್ರ ಮರೆಯಬಾರದು. ಏಕೆಂದರೆ ನಾನು ಇನ್ನು ಮುಂದೆ ನಿಮ್ಮೊಡನೆ ಮಲೆನಾಡನ್ನು ಕುರಿತು ಆಡುವ ಹರಟೆಗಳಿಗೆಲ್ಲ ಇದು ನಕಾಶೆಯಾಗಬಹುದು. ಮಲೆನಾಡೆಲ್ಲ ನನ್ನದೇ, ಆದರೆ ಮಲೆನಾಡಿಗೆ ಮೊದಲು ಮನೆ ನನ್ನದಷ್ಟೆ? ಆದ್ದರಿಂದ ನಾನು ಹರಟುವ ವಿಷಯಗಳಿಗೆಲ್ಲ ನಮ್ಮ ಮನೆ ಕೇಂದ್ರಸ್ಥಾನವಾಗಿಬಿಡಬಹುದು. ಆದ್ದರಿಂದ ಕಿವಿಗೊಟ್ಟು ಕೇಳಿ, ಕಣ್ಣಿಟ್ಟು ನೋಡಿ.

ಮಲೆನಾಡಿನಲ್ಲಿ ಹಳ್ಳಿಗಳೆಂದರೆ ವಿಶೇಷವಾಗಿ ಒಂದುಮನೆಯ ಊರುಗಳೆಂದು ನಿಮಗೆ ಹಿಂದೆ ಅನೇಕಸಾರಿ ಹೇಳಿದ್ದೇನೆ. ಮನೆಗಳೆಂದರೆ ಪುಟ್ಟ ಕೋಟೆಗಳಂತೆ ಇರುವುವು. ದೊಡ್ಡ ಹೆಬ್ಬಾಗಿಲು, ದಪ್ಪವಾದ ಸುತ್ತು ಗೋಡೆ. ಸ್ವಲ್ಪ ಸ್ಥೂಲವಾಗಿ ಹೇಳುವುದಾದರೆ ನಾಜೋಕಿನ ದೃಷ್ಟಿಗಿಂತ ಬಲದ ದೃಷ್ಟಿಯೇ ಹೆಚ್ಚು. ಏಕೆಂದರೆ ಆ ಕಾಡಿನಲ್ಲಿ, ಆ ಮಳೆಯಲ್ಲಿ, ಆ ಬಿರುಗಾಳಿಯಲ್ಲಿ, ಆ ಸಿಡಿಲು ಮಿಂಚುಗಳ ರುದ್ರವಾದ ನಲಿದಾಟದಲ್ಲಿ ಮನೆಗಳು ಭೀಮಾಕಾರವಾಗಿರದಿದ್ದರೆ ಬಹಳಕಾಲ ಬಾಳುವುದಿಲ್ಲ.

ನಮ್ಮ ಮನೆಯೂ ಮೇಲೆ ಹೇಳಿದಂಥ ಒಂದು ಹೆಮ್ಮನೆ. ಅದಕ್ಕೆ ಏತಕ್ಕೋ ಏನೋ 'ಕುಪ್ಪಳಿ' ಎಂದು ಹಿರಿಯರು ಹಸರಿಟ್ಟಿದ್ದಾರೆ. ಸ್ಥಳಪುರಾಣವನ್ನು ಪ್ರಶ್ನೆಮಾಡಿದರೆ ಕುಪ್ಪಳಿಸಿಕೊಂಡು

ಬರಬೇಕಾಗಿದ್ದುದರಿಂದ ಆ ಮನೆಗೆ 'ಕುಪ್ಪಳಿ' ಎಂದು ಹೆಸರಾಯಿತು ಎಂದು ಗೊತ್ತಾಗುವುದು. ಅದು ನಿಜವೋ ಸುಳ್ಳೋ ಏನಾದರಿರಲಿ. ಸುಳ್ಳಾದ ಮಾತ್ರಕ್ಕೆ ನಮ್ಮ ಅಜ್ಞಾನ ಹೆಚ್ಚುವ ಸಂಭವವೂ ಇಲ್ಲ; ನಿಜವಾದರೆ ನಾವು ಸುಜ್ಞಾನಿಗಳಾಗುವುದೂ ಅಷ್ಟರಲ್ಲಿಯೇ ಇದೆ!

ನಮ್ಮ ಮನೆಯು ಮಲೆನಾಡಿನ ವನಾಲಂಕೃತ ಗಿರಿಶ್ರೇಣಿಗಳ ತೊಡೆಯ ಮೇಲೆ ಕೂತಿದೆ. ನಮ್ಮ ಮನೆಯ ಹಿತ್ತಲುಕಡೆಯನ್ನು ನಾವು ಬೆಟ್ಟದಿಂದ ಕಡಿದು ಕಡಿದು ಯುದ್ಧಮಾಡಿ ಗದ್ದುಕೊಂಡಿದ್ದೇವೆ. ಮನೆಯಿಂದ ಪೂರ್ವದಿಕ್ಕಿಗೆ ಹತ್ತುಮಾರು ಹೋಗುವುದರೊಳಗಾಗಿ ಬೆಟ್ಟನೇರಿ ಕಾಡಿನಲ್ಲಿ ತೂರಬೇಕು. ಮನೆಗೆ ಪೂರ್ವೋತ್ತರ ದಕ್ಷಿಣಭಾಗಗಳಲ್ಲಿ ಭೀಮಾಕಾರವಾದ ಪರ್ವತಶ್ರೇಣಿಗಳು ದಿಗಂತವನ್ನು ನಡುಬಾಸಿಗೆತ್ತಿ ನಿಂತಿವೆ. ಪಶ್ಚಿಮಭಾಗದಲ್ಲಿಯೂ ಬೆಟ್ಟಗಳಿವೆ; ಆದರೆ ಒಂದು ಮೈಲಿಯಷ್ಟು ದೂರ. ನಡುವೆಯೇನೋ ಬೇಕಾದಷ್ಟು ಕಾಡುಗಳಿವೆ. ನಮ್ಮ ಮನೆಗೂ ಪೂರ್ವಾದ್ರಿಗೂ ನಡುವೆ ನಮ್ಮ ಅಡಕೆ ತೋಟದ ಒಂದು ತುದಿ ನೆರಗು ಹಬ್ಬಿಕೊಂಡಿದೆ. ಆ ನೆರಗಿನಲ್ಲಿಯೇ ನಮ್ಮ ಮನೆಯ ಕೆರೆಯಿದೆ. ಕೆರೆಗೂ ಮನೆಗೂ ಅರ್ಧ ಫರ್ಲಾಂಗು ದೂರವಿದೆ. ಕೆರೆಯು ಬೆಟ್ಟದ ಒಡಲಲ್ಲಿ ಅರಣ್ಯದ ಮಡಿಲಲ್ಲಿ ಮಲಗಿದೆ. ಕಾಡಿನ ಹೆಮ್ಮರಗಳು, ಪೊದೆಗಳು, ಬಿದಿರುಮೆಳೆಗಳು ಅದರ ನೀರಿನ ಮೇಲೆ ಚಾಚಿಕೊಂಡಿವೆ. ಪ್ರಾತಃಕಾಲದ ತರುಣಾರುಣ ಜ್ಯೋತಿಯಲ್ಲಿ ನೋಡಿದರೆ ವ್ಯೋಮರೆಸುವಂತೆ ಮನೋಜ್ಞವಾಗಿರುವುದು.

ನಮ್ಮ ಉಪ್ಪರಿಗೆಯು ಪೂರ್ವದಿಕ್ಕಿಗೆ ತೆರೆದುಕೊಂಡಿದೆ ಉಳಿದೆಲ್ಲದಿಕ್ಕಿಗೂ ಗೋಡೆ ಕಿಟಕಿಗಳಿವೆ. ಅಲ್ಲಿ ಕುಳಿತು ನೋಡಿದರೆ ಸಮ್ಮುದುರಾಗಿ ಇಳಿಜಾರಾಗಿ ಮೇಲೆದ್ದಿರುವ ಅನಂತ ನಿಬಿಡಾರಣ್ಯ ಶ್ರೇಣಿಗಳು ಗಂಭೀರವಾಗಿ ಸುಂದರವಾಗಿ ರಂಜಿಸುವುವು ಅಲ್ಲಿ ನಮಗೆ ತಿಳಿಯುವುದು, ಹಸುರುಬಣ್ಣದಲ್ಲಿ ಎಷ್ಟು ಬಗೆಗಳಿರಬಹುದೆಂದು. ಆ ಗಿರಿಗಳಾಚೆಯಲ್ಲಿ ನೀಲಾಕಾಶವು ಪಾತಾಳದಲ್ಲಿ ನಿಂತು ಸ್ವರ್ಗವನ್ನು

ಇಣಿಕಿ ನೋಡುವಂತೆ ಧೀರಗಂಭೀರವಾಗಿರುವುದು. ಆ ಗಿರಿಶಿಖರ ರೇಖೆಯಲ್ಲಿ ಇತರ ವೃಕ್ಷಗಳಿಗಿಂತ ಹಿರಿದಾಗಿ ಎತ್ತರವಾಗಿ ಬೆಳೆದ ಹೆಮ್ಮರಗಳು ಆಕಾಶಪಟದಲ್ಲಿ ಬರೆದು ಕೆತ್ತಿ ಮೆತ್ತಿದ ಸಜೀವ ಚಿತ್ರಗಳಂತೆ ತೋರಿ, ವಿಶ್ವವರ್ಣಶಿಲ್ಪಿಯ ವರ್ಣಸಾಮ್ರಾಜ್ಯದ ಕಲಾಕೌಶಲ್ಯವನ್ನು ಸಾರುವ ಗೆಲ್ಲುಂಬಗಳ ಮೇಲೆ ಹಾರಾಡುವ ಶ್ಯಾಮಲ ಕೇತನಗಳಂತೆ ಕಂಗೊಳಿಸುವುವು. ಆ ದೃಶ್ಯವು ದಿನದಿನಕ್ಕೂ ಹೊತ್ತು ಹೊತ್ತಿಗೂ ಬೇರೆಬೇರೆ ಸೌಂದರ್ಯದಿಂದ ನಲಿಯುವುದು. ಅದು ಅನಂತ ಕವಿಯು ಅನಂತಾನಂತ ಕವನಗಳನ್ನು ವಿರಚಿಸುವ ಕಾವ್ಯರಂಗದಂತೆ ಮೆರೆಯುವುದು. ಮಳೆಗಾಲದಲ್ಲಿ ಒಂದು ದೃಶ್ಯ; ಚಳಿಗಾಲದಲ್ಲಿ ಮತ್ತೊಂದು ದೃಶ್ಯ; ಬೇಸಗೆಯಲ್ಲಿ ಇನ್ನೊಂದು ದೃಶ್ಯ. ಬೆಳಗಿನಲ್ಲಿ ಒಂದು ದೃಶ್ಯ; ಬೈಗಿನಲ್ಲಿ ಇನ್ನೊಂದು ದೃಶ್ಯ; ಹಗಲಿನಲ್ಲಿ ಮತ್ತೊಂದು ದೃಶ್ಯ. ಬೆಳ್ದಿಂಗಳಲ್ಲಿ ಬೇರೊಂದು ಚೆಲುವು, ಕರ್ದಿಂಗಳಲ್ಲಿ ಮಗುದೊಂದು ನೋಟ.

ನಮ್ಮ ಉಪ್ಪರಿಗೆಯಲ್ಲಿ ಗದಾಯುದ್ಧವೋ, ಜೈಮಿನಿಭಾರತವೋ, ಗದುಗಿನ ಭಾರತವೋ, ಪಂಪನೋ, ಷೆಲ್ಲಿಯೋ, ವರ್ಡ್ಸ್‌ವರ್ತ್ಸನೋ, ಯಾವ ಕಾವ್ಯದೊಡನೆಯಾಗಲಿ, ಯಾವ ಕವಿಯೊಡನೆಯಾಗಲಿ ನಾವಿರುವಾಗ ಸುತ್ತಲೂ ನಾನಾ ಪಕ್ಷಿಗಳ ಸಹಸ್ರಾರು ಕಂಠಧ್ವನಿಗಳು ಕೇಳಿಸುವುವು ಅರಣ್ಯದಿಂದ ಹುಲಿ, ಹಂದಿ, ಮಿಗ, ಸಿಂಗಳೀಕ ಮೊದಲಾದ ಜಂತುಗಳ ನಾದಗಳು ಕೇಳಿಬರುವುವು. ಆಗ ಕಲ್ಪನೆಯು ಕುರುಡಾಗಿದ್ದರೆ ಅದಕ್ಕೆ ದಿವ್ಯದೃಷ್ಟಿ ದೊರಕುವುದು; ಪ್ರತಿಭೆಯು ಕುಂಟಾಗಿದ್ದರೆ ಅದಕ್ಕೆ ಮಿಂಚಿನ ವೇಗವು ಲಭಿಸುವುದು; ಆತ್ಮದಲ್ಲಿ ಜಡತನವಿದ್ದರೆ ಅದಕ್ಕೆ ಬದಲಾಗಿ ಚೈತನ್ಯದ ಚಿಲುಮೆ ಚಿಮ್ಮುವುದು. ಇವುಗಳಿಗೆಲ್ಲ ನಿದರ್ಶನಗಳೂ ಉದಾಹರಣೆಗಳೂ ನಾನು ಮುಂದೆ ಹೊಡೆಯಬಹುದಾದ ಹರಟೆಗಳಲ್ಲಿ ನಿಮಗೆ ದೊರಕಬಹುದು. ಇಂತಹ ಹರಟೆಗಳಲ್ಲಿ ನಿಮಗೆ ತಾಳ್ಮೆ ತೋರಿದರೆ, ನಿಮಗೆ ಇಷ್ಟವಿದೆ ಎಂದು ತಿಳಿದು ಬಂದರೆ, ನಾನು ಬಾಯಿಗೆ ಬೀಗ ಹಾಕಿಕೊಳ್ಳುವು

ದಿಲ್ಲ. ಏಕೆಂದರೆ ನಾನೊಬ್ಬ ದೊಡ್ಡ ಹರಟೆಗಾರನೆಂದು ನಿಮಗೆ ಮೊದಲೇ ತಿಳಿಸಿಬಿಡುತ್ತೇನೆ.

ನಾನು ಏನನ್ನೋ ಹೇಳಲು ಹೋಗಿ ಇನ್ನೇನನ್ನೋ ಹರಟುತ್ತ ಕುಳಿತುಬಿಟ್ಟೆ. ಹರಟೆಯು ಹಣೆಯಬರಹವೇ ಹೀಗೆ. ತುದಿಯಿಲ್ಲ, ಬುಡವಿಲ್ಲ, ಗೊತ್ತಿಲ್ಲ, ಗುರಿಯಿಲ್ಲ ಜಗತ್ತಿನಲ್ಲಿ ದೇವರಿಗೆ ಸರಿಸಮನಾಗಿರುವುದೆಂದರೆ ಹರಟೆಯೊಂದೇ! ಹರಟೆಯೆಂದರೆ ಬೇಜಾರಿಗೆ ಭೇಷಜವಿದ್ದಹಾಗೆ. ಪೂರ್ವಾನುಭವಗಳೆಂಬ ಸ್ವಪ್ನಾರಣ್ಯದಲ್ಲಿ ಪೋಲಿ ಪೋಲಿಯಾಗಿ ಅಲೆಯುವುದೇ ಹರಟೆ.

ಆ ದಿನ ನಾವು ಎದ್ದಾಗ ಆರು ಗಂಟೆಯಾಗಿತ್ತು. ನಮ್ಮ ಮಹಡಿಯಿಂದ ನಮ್ಮ ಕಣ್ಣಿಗೆ ಬಿದ್ದ ನೋಟವು ಅತೀವ ರಮಣೀಯವಾಗಿತ್ತು. ಪೂರ್ವಪರ್ವತ ಶೃಂಗದಾಚೆ ಅರುಣ ಕಿರಣಗಳ ಎಳಸುಸಿ ಬೆಳಕು ನಲಿದಾಡುತ್ತಿತ್ತು. ಎಚ್ಚೆತ್ತ ಅರಣ್ಯಗಳ ಸೌಂದರ್ಯವು ಕೋಟ್ಯನುಕೋಟಿ ವಿಹಂಗಮಗಳ ಇಂಚರದಿಂದ ಮಂಜು ಮಂಜುಳವಾಗಿತ್ತು. ನನೆದ ಹಸುರುತಳಿರಿನ ಹಿರಿಯ ಕಡಲು ಅಲೆ ಅಲೆಯಾಗಿ ಉಷಃಕಾಲದ ಮಂದಸಮೀರಣದಿಂದ ಆಂದೋಳಿತವಾಗಿ ತಲೆದೂಗುತ್ತಿತ್ತು. ಲಕ್ಷೋಪಲಕ್ಷ ಹಿಮಮಣಿಗಳು ಬೆಳೆಯುತ್ತಿದ್ದ ಎಳಬಿಸಿಲಿನಲ್ಲಿ ಮಿರುಗಿ ಮಿಂಚಿ ಮಿಣುಕುತ್ತಿದ್ದುವು. ಮೊದಲು ಆಕಾಶ; ಹೊಂಬಣ್ಣದ ಹೊಳೆ ಹರಿಯುತ್ತಿದ್ದ ಆಕಾಶ. ತರುವಾಯ ಹಿಂದೆ ವರ್ಣಿಸಿದಂತಹ ಶ್ಯಾಮಲವನಪರಿವೃತ ಶೈಲಶ್ರೇಣಿಗಳು. ಆ ಮೇಲೆ ಇನ್ನೂ ಕೆಳಗೆ ನೀಳವಾಗಿ ಎತ್ತರವಾಗಿ ಬೆಳೆದು ಗಾಳಿಗೆ ಅತ್ತ ಇತ್ತ ತೂಗಾಡುತ್ತಿದ್ದ ತೋಟದ ಅಡಕೆ ಮರಗಳು. ಪಕ್ಕದಲ್ಲಿ ತೆಂಗಿನ ಮರಗಳ ಸಾಲು. ಅಲ್ಲಿಯೇ ಕೆರೆಯ ಏರಿಯ ಮೇಲೆ ಬೆಳೆದಿರುವ ನಾಲ್ವತ್ತು ಐವತ್ತು ಅಡಿಗಳಷ್ಟು ಎತ್ತರವಾದ ದೊಡ್ಡ ಸಂಪಗೆ ಮರ. ಚೈತ್ರ ಮಾಸದ ಪಸುಳೆಬಿಸಿಲು. ಪಕ್ಷಿಗಳ ತುಮುಲ ಸ್ವರ ಮೇಳ. ಮೆಲ್ಲಗೆ ಬೀಸುವ ಬನದೆಲರು. ತಳತಳಿಸುವ ಹಿಮಮಣಿಗಳು. ಸ್ನಾನದ ಮನೆಯ ಪೇರೊಲೆಯಿಂದ ಸುತ್ತಿಸುತ್ತಿ ಸರ್ಪ

ಗನುಸದಿಂದ ಸ್ತೂಪಾಕಾರವಾಗಿ ಎಳಬಿಸಿಲಿನಲ್ಲಿ ಮೇಲೇಳುತ್ತಿದ್ದ ಧೂಮರಾಶಿ. ಜೊತೆಗೆ ಮನೆಯ ಮಂದಿಯ ಮೋಹನತರ ಮಾನವ ವಾಣಿ! ಎಲ್ಲ ಸುಂದರವಾಗಿತ್ತು; ಸ್ವರ್ಗೀಯವಾಗಿತ್ತು; ಮುದ್ದಾಗಿತ್ತು!

ಗೋಪಾಲ ಬಂದು ನಮ್ಮನ್ನು ಸ್ನಾನಕ್ಕೆ ಕರೆದ. ಎಲ್ಲರೂ ಕೆರೆಯ ಬಳಿಯ ಬಚ್ಚಲುಮನೆಗೆ ಹೋದೆವು. ನಮ್ಮ ಕಡೆ ಸ್ನಾನದ ಮನೆಗ "ಬಚ್ಚಲು" ಎಂದು ಹೇಳುತ್ತಾರೆ.. ನಮ್ಮ ಕಡೆಯ ನುಡಿ ಗಟ್ಟಿನಂತೆ ಬಣ್ಣಿಸುವುದಾದರೆ "ಬಚ್ಚಲಿಗೆ ಹೋದೆವು."—ನಾನು, ಪಿ—, ವೆಂ—, ಮೂರ್ತಿ. ಮೂರ್ತಿ ಬಯಲುಸೀಮೆಯವರು; ಅದರಲ್ಲಿಯೂ ಮೈಸೂರು ನಗರದವರು. ನನ್ನೊಂದಿಗೆ ನಮ್ಮ ನಾಡಿನ, —ಕಾಡಿನ ಎಂದರೇ ಲೇಸೆಂದು ತೋರುತ್ತದೆ.—ನಮ್ಮ ಕಾಡಿನ ಸೊಬಗು ಸವಿಯಲು ಬೇಸಗೆ ರಜದಲ್ಲಿ ಬಂದಿದ್ದರು. ಸೊಬಗನ್ನು ಸವಿದರೋ ಬಿಟ್ಟರೋ ನಾ ಹೇಳಲಾರೆ, ಮಲೇರಿಯಾ ಜ್ವರವನ್ನೇನೋ ಸ್ವಲ್ಪ ಮಟ್ಟಿಗೆ ಸವಿದರು; ಹೋಗಲಿ, ಆ ಕತೆ ಈಗ ಬೇಡ; ಇನ್ನೊಂದು ಸಾರಿಗಿರಲಿ!

ನಾನು ಮೀಯುತ್ತಿದ್ದೆ. ಪಿ—, ವೆಂ—, ಮೂರ್ತಿ ಎಲ್ಲರೂ ಕೆರೆಯ ಏರಿಯ ಮೇಲೆ ಕುಳಿತು ಲೋಕಾಭಿರಾಮವಾಗಿ ಮಾತಾಡುತ್ತ ಗಹಗಹಿಸಿ ನಗುತ್ತಿದ್ದರು. ನಮ್ಮ "ಶಿಷ್ಯ" ಗೋಪಾಲ ಕೆಲಸದಲ್ಲಿ ತೊಡಗಿದ್ದ. ಇದ್ದಕ್ಕಿದ್ದ ಹಾಗೆ ಹರಟೆ ನಿಂತಿತು. ಎಲ್ಲರೂ ಏನೋ ಒಂದು ಸದ್ದನ್ನು ಕಿವಿ ನಿಮಿರಿ ಕೇಳುತ್ತಿದ್ದರು. ನಾನೂ ಆಲಿಸಿದೆ. ಕಾಡಾಗಿದ್ದ ಕೆರೆಯಾಚೆಯ ಮೂಲೆಯಲ್ಲಿ ಏನೋ ಹೂಂಕರಿಸುತಿತ್ತು. ಒಂದು ಸಾರಿ ಗರ್ಜಿಸಿದಂತಾಯ್ತು. ಒಬ್ಬರು ಒಬ್ಬರ ಮೊಗವನ್ನು ನೋಡಿದೆವು. ಎಲ್ಲರ ಮುಖಭಂಗಿಯೂ ಪ್ರಶ್ನಾರ್ಥಕ ಚಿಹ್ನೆಯಾಗಿತ್ತು. ಹೂಂಕಾರವು ನಿಂತುಹೋದಮೇಲೆ ಮೆಲ್ಲನೆ ಮಾತೆತ್ತಿದೆವು. ಒಬ್ಬರು ಕಾಡುಹಂದಿಯಾಗಿರಬೇಕು ಎಂದರು. ಮತ್ತೊಬ್ಬರು ಹುಲಿಯಿರಬಹುದೇ ಎಂದರು. ಅಂತೂ ಪ್ರಾಣಿ ಇಂಥಾದ್ದೆಂದು

ನಿರ್ಣಯವಾಗಲಿಲ್ಲ. ಕಾಫಿ ತಿಂಡಿ ಪೂರೈಸಿಕೊಂಡು ಹೋಗಿ ಪರೀಕ್ಷಿಸಬೇಕೆಂದು ಗೊತ್ತುಮಾಡಿ, ಬೇಗ ಬೇಗನೆ ಸ್ನಾನದ ಶಾಸ್ತ್ರವನ್ನು ಮುಗಿಸಿದೆವು.

ಹಿ— ಜೋಡುನಳಿಗೆ ತೋಟಾ ಕೋವಿ ತೆಗೆದುಕೊಂಡರು. ನಾನು ಹನ್ನೆರಡು ಗುಂಡಿನ 'ರೈಫಲ್' ಹಿಡಿದುಕೊಂಡೆ. ವೆಂ—, ಮೂರ್ತಿ ಬರಿಗೈಯಲ್ಲಿಯೇ ಹೊರಟರು. ಗೋಪಾಲ ನಾಯಿಗಳನ್ನು ಸಿಳ್ಳುಹಾಕಿ ಕರೆದನು. ನಾಯಿಗಳೆಲ್ಲ ಓಡಿಬಂದುವು. ನಾವು ಬೇಟೆಗೆ ಹೊರಟುದನ್ನು ಕಂಡು ಅವುಗಳಿಗೆ ಬಹಳ ಆನಂದವಾಯಿತೆಂದು ತಮ್ಮ ಲಾಂಗೂಲನೃತ್ಯದಿಂದ ಸೂಚಿಸಿದುವು. ವಿಳಂಬ ಮಾಡದೆ ನಡೆದೆವು. ನಾನು, ಹಿ— ಬಲ್ಲಿಗೆ ನಿಂತೆವು. ಉಳಿದ ಮೂವರೂ ಹಳುವಿಗೆ ಹೋದರು. ನಾಯಿಗಳೇನೋ ಹಳುವಿನಲ್ಲಿ ಬಗುಳಿದುವು. ಆದರೆ ಯಾವ ಪ್ರಾಣಿಯೂ ಹೊರಡಲಿಲ್ಲ. ಹಳುವಿನವರು ಸೋವಿಸೋವಿ ಹೊರಹೊರಟರು ನಮ್ಮ ಹೇರಾಸೆಗಳೆಲ್ಲ ಬಟ್ಟಬಯಲಾದುವು. ಬಹುಶಃ ಹಂದಿಗಳು ನಾವು ಉಪಾಹಾರ ಪೂರೈಸಿಕೊಂಡು ಬರುವಷ್ಟರಲ್ಲಿ ಅಲ್ಲಿಂದ ಮುಂದೆ ಹೋಗಿರಬೇಕೆಂದು ನಿರ್ಧರಿಸಿ, ಮೂರ್ತಿ, ವೆಂ—, ಗೋಪಾಲರನ್ನು ಮನೆಗೆ ಕಳುಹಿಸಿ, ನಾನು ಹಿ—ಇಬ್ಬರೂ ನಾಯಿಗಳನ್ನು ಕರೆದುಕೊಂಡು ಕಾಡಿಗೆ ಏರಿದೆವು.

ಈ ಕತೆಯನ್ನು ಮುಂದುವರಿಸುವ ಮೊದಲು ನಮ್ಮ ಬೇಟೆಯ ತತ್ತ್ವದ ವಿಚಾರವಾಗಿ ಎರಡು ನುಡಿಗಳನ್ನು ಸಂಕ್ಷೇಪವಾಗಿ ಹೇಳುತ್ತೇನೆ. ಸಮಯಸಿಕ್ಕಿದಾಗ ವಿಸ್ತಾರವಾಗಿ ಹೇಳುವೆನು. ಸದ್ಯಕ್ಕೆ ಬೇಡ.

ಬೇಟೆಗಳಲ್ಲಿ ಅನೇಕವಿಧಗಳುಂಟು. ಒಂದನೆಯದು ಕೂಡು ಬೇಟೆ; ದೊಡ್ಡಬೇಟೆ ಎಂದೂ ಕರೆಯುತ್ತಾರೆ. ಇದರಲ್ಲಿ ಜನರು ಬಹುಸಂಖ್ಯೆ. ಕೆಲವರು ಬಿಲ್ಲಿನವರು. ಕೆಲವರು ಹಳುವಿನವರು. ಬಿಲ್ಲಿನವರಲ್ಲ ಪ್ರತಿಯೊಬ್ಬರಿಗೂ ಬಂದೂಕು ಇರಲೇ ಬೇಕು. ಹಳುವಿನವರಲ್ಲಿ ಇರಬೇಕೆಂಬ ನಿಯಮವಿಲ್ಲ. ಕೆಲವರಲ್ಲಿ ಮಾತ್ರ ಇರುವುದು

ಸಂಪ್ರದಾಯ. ಹಳುವಿನವರು ಕಾಡನ್ನು ನಾಯಿಗಳ ಸಹಾಯ ದಿಂದಲೂ, ಕೂಗುಕಾಕಿಸ ಸಹಾಯದಿಂದಲೂ ಸೋವಿಕೊಂಡು ಬರುವರು. ಬಿಲ್ಲಿನವರು ಜೀವಾವಿಗಳು ಆ ಕಾಡಿನಿಂದ ಇನ್ನೊಂದು ಕಾಡಿಗೆ ಓಡುವ ಜಾಗಗಳನ್ನು ಅರಿತು ಸ್ವಲ್ಪ ದೂರದೂರವಾಗಿ ನಿಲ್ಲು ವರು. ಅಂತಹ ತಾಣಗಳನ್ನು ಬೇಟೆಗಾರರು ತಮ್ಮ ಪರಿಭಾಷೆಯಲ್ಲಿ "ಕಂಡಿ" ಎಂದು ಕರೆಯುತ್ತಾರೆ. ಪ್ರಾಣಿಗಳು ಹಳುವಿನವರ ಆರ್ಭ ಟಕ್ಕೆ ಬೆದರಿ ಕಂಡಿಗಳಿಗೆ ಧಾವಿಸಿ ಬಂದಾಗ ಬಿಲ್ಲಿನವರು ಸುಟ್ಟು ಕೆಡ ಹುತ್ತಾರೆ. ಕೆಲವರೇನೋ ಗುಂಡನ್ನು ಹಾರಿಸಿಬಿಡುತ್ತಾರೆ. ಬಂದ ಜೀವಜಂತುಗಳು ಅಕ್ಷತವಾಗಿ ಪಾರಾಗುವುದೂ ಉಂಟು! ಎರಡನೆ ತರಹದ ಬೇಟೆಯನ್ನು "ಸಾರಿಕೆ ಬೇಟೆ" ಎಂದು ಕರೆಯುತ್ತಾರೆ. ಅದರಲ್ಲಿ ಬೇಟೆಗಾರನು ಒಬ್ಬನೇ ಹೊರಟು (ನಾಯಿ ಗೀಯಿ ಒಂದೂ ಇರುವುದಿಲ್ಲ) ಕಾಡಿನಲ್ಲಿ ಸುಮ್ಮನೆ ಅಲೆಯುತ್ತ ಹೋಗುತ್ತಾನೆ. ಆಗ ಕಣ್ಣಿಗೆ ಬಿದ್ದ ಪ್ರಾಣಿಗಳನ್ನು ಹೊಡೆಯುತ್ತಾನೆ. ಮೂರನೆ ಯದು "ಮರಸು ಬೇಟೆ". ಇದರಲ್ಲಿ ಬೇಟೆಗಾರನು ಕಾಡಿನಲ್ಲಿ ಪ್ರಾಣಿ ಗಳು ತಿರುಗಾಡುವ ಕಂಡಿಯಲ್ಲಾಗಲಿ, ಯಾವುದಾದರೊಂದು ಹಣ್ಣಿ ನ ಮರದಲ್ಲಾಗಲಿ ಮರೆಮಾಡಿಕೊಂಡು ಕುಳಿತು ಪ್ರಾಣಿಗಳನ್ನು ಕಾಯುವನು. ಅವು ನಿಶ್ಶಂಕೆಯಿಂದ ತಿರುಗುತ್ತ ಬಂದಾಗ ಸುಡು ವನು. ಇದೇ ರೀತಿಯಾಗಿ ಬೆಳ್ದಿಂಗಳ ಬೇಟೆಯೂ ಉಂಟು. ಇವು ಗಳಲ್ಲ ಕೋವಿ ಕಟ್ಟುವುದೂ ಉಂಟು.—ಅಂದರೆ ಜೀವಿಗಳು ಬರುವ ಜಾಡನ್ನು ಕಂಡುಹಿಡಿದು, ಕೋವಿಯನ್ನು ಕಟ್ಟಿ, ಕುದುರೆಯನ್ನು ಎತ್ತಿಟ್ಟು, ಬಿಲ್ಲಿಗೆ ಒಂದು ಬಹು ಸೂಕ್ಷ್ಮವಾದ ದಾರವನ್ನು ಕಟ್ಟಿ ಅದನ್ನು ದಾರಿಗೆ ಅಡ್ಡಲಾಗಿ ಕಟ್ಟುವರು. ಅದಕ್ಕೊಂದು ಸಿಡಿಗೋಲಿನ ನೆರವಿರುವುದು. ಪ್ರಾಣಿಯು ಬಂದು ದಾರವನ್ನು ತಗುಲಿದರೆ ಸಾಕು ಗುಂಡುಹಾರುವುದು. ಇವುಗಳನ್ನೆಲ್ಲ ಕುರಿತು ಇನ್ನೊಂದು ಸಾರಿ ವಿಶದವಾಗಿ ವಿವರಿಸುವೆನು; ಸದ್ಯಕ್ಕೆ ದಯವಿಟ್ಟು ಮನ್ನಿಸಿ.

ನಾವು ಆ ದಿನ ಹೊರಟಿದ್ದು ಒಂದು ವಿಧವಾದ "ಸಾರಿಕೆಬೇಟೆ"

ಎಂದೇ ಹೇಳಬಹುದು. ಆದರೆ ನಮ್ಮ ಸಂಗಡ ನಾಯಿಗಳಿದ್ದುವು. ಅವು ಕಾಡಿನಲ್ಲೆಲ್ಲ 'ಗಾಳಿಹಿಡಿಯುತ್ತ' ನಮ್ಮೊಡನೆ ಹೋಗುತ್ತಿದ್ದುವು. ನಾನು ಬೆಟ್ಟದ ಮೇಲ್ಭಾಗದಲ್ಲಿ ಹೋಗುತ್ತಿದ್ದೆ. ಹಿ— ನನಗೆ ಒಂದು ಒಂದೂವರೆ ಫರ್ಲಾಂಗು ದೂರದಲ್ಲಿ ಕೆಳಗಡೆ ನನಗೆ ಸಮ ನೂರವಾಗಿ ಬರುತ್ತಿದ್ದರು. ನಾನು ಹೋಗುತ್ತಿದ್ದಾಗ ಒಂದು ಮೊಲವು ಇದ್ದಕ್ಕಿದ್ದ ಹಾಗೆ ನಾಯಿಗಳಿಗೆ ತಪ್ಪಿಸಿಕೊಂಡು ಹಾರಿ ಬಂದಿತು. ಹೊಡೆಯಲು ಕೋವಿ ಎತ್ತಿದೆ. ಆದರೆ ನನ್ನ ಕೈಯಲ್ಲಿ ದ್ದುದು ರೈಫಲ್ ಎಂದು ಹೆದರಿ ಸುಮ್ಮನಾದೆ. ಏಕೆಂದರೆ ಆದರ ಗುಂಡು ಬಹಳ ದೂರದವರೆಗೂ ಹೋಗುತ್ತದೆ. ನನ್ನ ಕೆಳಭಾಗದಲ್ಲಿ ಹಿ— ಇದ್ದಾರೆಂದು ನನಗೆ ಭಯವಾಯಿತು. ನಾನು ಮೊಲಕ್ಕೆ ಹೊಡೆ ದರೂ, ಗುಂಡು ಮೊಲವನ್ನು ಭೇದಿಸಿಕೊಂಡು ಹೋಗುವುದರಲ್ಲಿ ಸಂದೇಹವಿಲ್ಲ. ಎಲ್ಲಿಯಾದರೂ ಗ್ರಹಚಾರವಶಾತ್ ನನ್ನ ಗುಂಡಿನ ದಾರಿಯಲ್ಲಿಯೇ ಆವರಿದ್ದರೆ ಗತಿಯೇನು? ಹೀಗೆಂದು ಈಡು ಹಾರಿ ಸದೆ ಬಿಟ್ಟೆ.

ಆಗ ಸುಮಾರು ಎಂಟುಗಂಟೆಯ ಸಮಯ. ಹಸುಳೆ ಬಿಸಿಲು ಬನಗಳ ಹಸುರಿನ ಮೇಲೆ ಬಿದ್ದು ಹಸುರುಗಟ್ಟಿ ಹೋದಂತಿತ್ತು. ಮಡಿವಾಳ, ಕಾಜಾಣ, ಕೋಗಿಲೆ, ಚೋರೆ, ಮರಕುಟಿಕ, ಸಿಳಾಂಗುಲಿ ಕುಟುರ ಮೊದಲಾದ ಹಕ್ಕಿಗಳ ಪರಿಷತ್ತು ಸೇರಿ ಬನವೆಲ್ಲ ದನಿಯಿಂದ ತುಂಬಿದ್ದಿತು. ನಾವು ಹೋಗುತ್ತಿದ್ದುದು ನಡುಗಾಡಾಗಿರಲಿಲ್ಲ. ನಡುಗಾಡಿನಿಂದ ಕಾಡಿನಂಚಿಗೆ ಬರುತ್ತಿದ್ದ ಕಾಡುಕೋಳಿಗಳ ಚೀರಿಂ ಚರವು ಬೆಟ್ಟದಿಂದ ಬೆಟ್ಟಕ್ಕೆ ಹಾರಿ ಅನುರಣನವಾಗುತ್ತಿತ್ತು.

ಹಾಗೆಯೇ ಮುಂದುವರಿದೆವು. ಹಿ— ಹೊದರುಮರಗಳಲ್ಲಿ ದೂರದಲ್ಲಿ ಬರುತ್ತಿದ್ದರು. ನನಗೆ ಸ್ವಲ್ಪವೂ ಗೋಚರಿಸುತ್ತಿರಲಿಲ್ಲ. ನಾನು ಒಂದು 'ಸರು' (ಸಣ್ಣ ಕಣಿವೆ) ವನ್ನು ಇಳಿದು ಮತ್ತೊಂದು ದಿಬ್ಬವನ್ನು ಏರಿದೆನು. ಅಲ್ಲಿ ಸ್ವಲ್ಪ ಬಯಲು ಬಯಲಾಗಿತ್ತು. ತಿರೆ ವೆಣ್ಣಿನ ಮೈನವಿರು ನಿಮಿರಿದಂತೆ ನೆಲದಿಂದ ಹಸುರು ಹೊಮ್ಮಿದ್ದಿತು.

ಕೋಮಲ ಸೂರ್ಯಕಾಂತಿಯು ಆ ಹಸುರು ರತ್ನಕಂಬಳಿಯ ಮೇಲೆ ಮುದ್ದಾಗಿ ಮಲಗಿ ಮನೋಹರವಾಗಿತ್ತು. ನಾನು ಬೇಟೆಯನ್ನು ಮರೆತು ಸೊಬಗು ಸವಿಯುವುದರಲ್ಲಿ ತೊಡಗಿಬಿಟ್ಟೆ.

ಇದ್ದಕ್ಕಿದ್ದ ಹಾಗೆ ಬೆಚ್ಚಿ ಎಚ್ಚರಗೊಂಡೆ. ನಾಯಿಯೊಂದು ಅನತಿ ದೂರದಲ್ಲಿ ಗಟ್ಟಿಯಾಗಿ ಬಗುಳುತ್ತಿತ್ತು. ಅರಣ್ಯವು ಅದರ ಧ್ವನಿಮಾಲೆಯನ್ನು ಮಥಿಸಿ ಪ್ರತಿಧ್ವನಿಮಾಲೆಗಳನ್ನು ತರಂಗತರಂಗವಾಗಿ ಎಸೆಯುತ್ತಿತ್ತು. ನಾನು ನಿಮಿರಿ ನಿಂತು ಸುತ್ತಲೂ ನೋಡಿದೆ. ಏನೂ ಕಾಣಿಸಲಿಲ್ಲ. ನಾಯಿ ಬಗುಳುತ್ತಿದ್ದ ದಿಕ್ಕಿಗೆ ಓಡಿದೆ ಸ್ವಲ್ಪ ದೂರದಲ್ಲಿ ಒಂದು ಪೊದೆಯ ಬಳಿಯಲ್ಲ, ಹಸುರು ಹುಲ್ಲಿನ ಮೇಲೆ—ಏನು? ಏನೂ ಕಾಣಿಸುವುದಿಲ್ಲ! ನಾಯಿ ಮಾತ್ರ ಬಗುಳುತ್ತಿದೆ. ನಾನು ವನವರಾಹವಿರಬೇಕೆಂದು ಭಾವಿಸಿ ಧಾವಿಸಿದ್ದೆ. ಆದರೆ ಏನೂ ಕಾಣಿಸಲಿಲ್ಲ. ಇನ್ನು ಸ್ವಲ್ಪ ಮುಂದೆ ಓಡಿಹೋಗಿ ನಿಂತೆ. ನಾಯಿ ಬಗುಳುತ್ತ ಹಿಂದಕ್ಕೂ ಮುಂದಕ್ಕೂ ಹಾರಾಡುತಿತ್ತು. ನೋಡುತ್ತೇನೆ—ಎಂತಹ ರುದ್ರಮನೋಹರ ದೃಶ್ಯ!

ಆ ಪಕ್ಷಿಕೂಜನದಿಂದ ಮನೋಹರವಾದ ಕಾಡಿನಲ್ಲಿ, ಹೆಮ್ಮರಗಳ ಬೀಡಿನಲ್ಲಿ, ಮೆತ್ತೆಹಾಸಿಗೆಯಂತೆ ಕೋಮಲವಾಗಿ ಬೆಳೆದ ಹಸುರು ಹುಲ್ಲಿನ ಕಿರುಬಯಲಿನಲ್ಲಿ, ವಸಂತ ಸೂರ್ಯೋದಯದ ಹೊಂಬಿಸಿಲಿನಲ್ಲಿ, ಸುರಂಜಿತವಾಗಿ ಹೆಡೆಯೆತ್ತಿ ನಿಂತಿದೆ ಒಂದು ಸರ್ಪ. ರಾಜಸರ್ಪ! ಗೋಧಿಯ ಬಣ್ಣದ ಅದರ ತನುಕಾಂತಿಯು ಬಿದ್ದ ಎಳಬಿಸಿಲಿನಲ್ಲಿ ಹೊಳೆಯುತ್ತಿತ್ತು. ಅದರ ಅರ್ಧ ದೇಹವು ನೆಲೆಯ ಮೇಲೆ ವಕ್ರಾಕಾರವಾಗಿ ಹೊರಳುತ್ತಿತ್ತು. ಇನ್ನರ್ಧವು ನಿಮಿರಿ ನಿಂತು ಗಾಳಿಯಲ್ಲಿ ಬಳುಕುತಿತ್ತು. ಅದರ ಹೆಡೆಯು ಮೂರು ನಾಲ್ಕು ಅಡಿಗಳಷ್ಟು ಎತ್ತರವಾಗಿ ನಿಂತು ಎಡಕ್ಕೂ ಬಲಕ್ಕೂ ಹಿಂದಕ್ಕೂ ಮುಂದಕ್ಕೂ ವಿಶ್ರಾಂತಿಯಿಲ್ಲದೆ ಒಲೆಯುತ್ತಿತ್ತು. ಫಣೆಯಲ್ಲಿ ಕಪ್ಪು ಬಣ್ಣದ 'ಳ' ಕಾರವು ತನ್ನದೇ ಒಂದು ರೀತಿಯಿಂದ, ತನ್ನದೇ ಒಂದು ಬಿಂಕದಿಂದ ಪ್ರಕಾಶಿಸುತ್ತಿತ್ತು. ನಾಯಿಯು ಹಾವಿನ ಹೆಡೆಯ ಚಲನೆಗೆ ಹೊಂದಿಕೊಂಡು ಹಾರಾಡುತ್ತಿತ್ತು. ನಾಗರಹಾವು ಬಿಂಕ

ದಿಂದ ಕೊಂಕಿದ ತನ್ನ ಹೆಡೆಯನ್ನು ಮುಂದೆಸೆಯಲು ನಾಯಿಯು ಹಿಂದಕ್ಕೆ ಹಾರುವುದು; ಹಾವು ಹೆಡೆಯನ್ನು ಹಿಂದಕ್ಕೆಸೆಯಲು ಅದು ಮುಂದೆ ಹಾರುವುದು. ಒಮ್ಮೆ ಎಡಕ್ಕೆ ಚಿಮ್ಮುವುದು; ಒಮ್ಮೆ ಬಲಕ್ಕೆ ನೆಗೆಯುವುದು. ಚಲಿಸಿದಂತೆ ಹೆಗ್ಗೊರಲಿನಿಂದ ಬಗುಳು ವುದು. ಅಂತೂ ಪ್ರಾಣಿಗಳೆರಡೂ ಮಲೆತು ಎದುರುಬದುರಾಗಿ ನಿಂತಿದ್ದುವು. ಒಮ್ಮೆ ಸರ್ಪವು ಇನ್ನೇನು ನಾಯಿಯನ್ನು ಕಡಿಯಿತು ಎಂಬಂತೆ ತೋರುವುದು. ಆದರೆ ನಾಯಿಯು ಬಹಳ ಚಟುವಟಿಕೆಯಿಂದ ಹಾರಿ ತಪ್ಪಿಸಿಕೊಳ್ಳುವುದು. ಒಮ್ಮೆ, ನಾಯಿಯು ಸರ್ಪವನ್ನು ಇನ್ನೇನು ಕಚ್ಚಿತು ಎಂಬಂತೆ ತೋರುವುದು. ಆದರೆ ಸರ್ಪವು ಮಿಂಚಿನ ವೇಗದಿಂದ ಬಳುಕಿ ತಪ್ಪಿಸಿಕೊಳ್ಳುವುದು. ದೃಶ್ಯವು ರುದ್ರ ಮನೋಹರವಾಗಿತ್ತು. ನನ್ನ ಬಳಿ ಕ್ಯಾಮರಾ ಇದ್ದಿದ್ದರ ಎಂತಹ ನೋಟವನ್ನು ಹಿಡಿದಿಡಬಹುದಾಗಿತ್ತು! ಆದರ ಕ್ಯಾಮರಾಕ್ಕೆ ಬದಲಾಗಿ ರೈಫಲ್ ಇತ್ತು!

ನಾನು ಮೇಲೆ ಮಾಡಿದ ವರ್ಣನೆಯನ್ನೆಲ್ಲ ಆ ಎಡೆಗೆ ಬಂದು ನಿಂತು ಅರ್ಧಕ್ಷಣದಲ್ಲಿಯೇ ನೋಡಿದೆ. ಅದರ ಅಪಾಯವನ್ನು ಬೇಗನೆ ಮನಗಂಡೆ. ವಿಲಂಬನಕ್ಕೆ ಅವಕಾಶವಿರಲಿಲ್ಲ. ನನಗೆ ಸರ್ಪದ ಮೇಲೆ ಮಮತೆಯಿರಲಿಲ್ಲ. ಅದು ಕಾಡಿನ ಹಾವು ಅದರ ಯೋಗಕ್ಷೇಮಕ್ಕೆ ನಾನು ಹೊಣೆಯಲ್ಲ. ಆದರೆ ರೋಜಿ (ನಾಯಿಯ ಹೆಸರು) ನನ್ನದು. ನನ್ನ ಮುದ್ದಿನ ನಾಯಿ. ಅದು ನನಗಾಗಿ ತನ್ನ ಜೀವವನ್ನೂ ಲಕ್ಷಿಸುವುದಿಲ್ಲ. ಆದ್ದರಿಂದ ಅದಕ್ಕೆ ಅಪಾಯವಾಗದಂತೆ ನೋಡಿಕೊಳ್ಳುವುದು ನನ್ನ ಕರ್ತವ್ಯ. ಹಾವು ಕಡಿದರೆ ಅದು ಉಳಿಯುವುದಿಲ್ಲ. ನನಗೆ ಮದ್ದು ಮೊದಲೇ ಗೊತ್ತಿಲ್ಲ. ತಿಳಿದವರು ಬರಬೇಕಾದರೆ ಮುನ್ನವೇ ನಾಯಿ ಸತ್ತರೂ ಸಾಯಬಹುದು. ಆದ್ದರಿಂದ ನನ್ನ ಪಕ್ಷಪಾತವೆಲ್ಲ ನನ್ನ ರೋಜಿಯ ಮೇಲಿತ್ತು. "ಹಾಗಾದರೆ ಸರ್ಪದ ಮೇಲೆ ನಿನಗೇನು ದ್ವೇಷ?" ಎಂದು ನೀವು ಪ್ರಶ್ನೆ ಮಾಡಬಹುದು. ಅದಕ್ಕೆ ನನ್ನದೊಂದೇ ಉತ್ತರ. "ನಾನು ಬೇಟೆಗಾರ." ನನಗೆ ಹಾವನ್ನು ಕೊಲ್ಲಬೇಕೆಂದು ಮನಸ್ಸಾಗಲಿಲ್ಲ. ಹೇಗಾ

ದರೂ ರೋಜಿಯನ್ನು ಅಲ್ಲಿಂದ ಅಟ್ಟಿದರೆ ಸಾಕು ಎಂದು ಆಲೋಚಿಸಿದೆ. ಆದ್ದರಿಂದ ಹಾವಿನ ಗೋಜಿಗೆ ಹೋಗದೆ ನಾಯಿಯನ್ನೇ ಗದರಿಸಿದೆ. ಏಕೆಂದರೆ ನಾನೆಲ್ಲಿಯಾದರೂ ಹಾವಿನ ಮೇಲೆ ಒಂದು ಕಲ್ಲನ್ನು ಎಸೆದೆನೆಂದರೆ ನಾಯಿಯು ತನ್ನ ಪ್ರಾಣಾಪಾಯವನ್ನು ಸ್ವಲ್ಪವೂ ಗಮನಿಸದೆ ಹಾವಿನ ಮೇಲೆ ಬೀಳುವುದೇ ನಿಶ್ಚಯ. ಆಗಲೇ ನಾನು ಬಳಿ ಬಂದುದನ್ನು ಕಂಡು ರೋಜಿಯ ಧೈರ್ಯವೂ, ಉತ್ಸಾಹವೂ, ಸಾಹಸವೂ, ಆರ್ಭಟವೂ ಹೆಚ್ಚಿ ಹೋಗಿದ್ದುವು. ಅನುಭವದಿಂದ ನನಗೆ ನಾಯಿಗಳ ಸ್ವಭಾವ ಚೆನ್ನಾಗಿ ಗೊತ್ತು.

ರೋಜಿಯನ್ನು ಗದರಿಸಿದೆ. "ಹಚಾ! ಹಚಾ! ಹಛಾ!" ಎಂದು ಒರಲಿದೆ. "ರೋಜೀ! ರೋಜೀ!" ಎಂದು ರೇಗಿದೆ. "ಬಿಡೂ! ಬಿಡೂ!" ಎಂದು ಅಧಿಕಾರವಾಣಿಯಿಂದ ಕೂಗಿದೆ. ಆದರೆ ನಾನು ಕೂಗಿದಷ್ಟೂ ರೋಜಿಯ ಆಟೋಪವು ಪ್ರಬಲವಾಯಿತು. ನನ್ನ ವಾಣಿಯನ್ನು ಅದು ಉತ್ತೇಜಕವಾಣಿ ಎಂದು ತಿಳಿಯಿತೋ ಏನೋ? ಬೇರೆ ಸಮಯದಲ್ಲಾಗಿದ್ದರೆ ಹಾವು ನನ್ನನ್ನು ಅಟ್ಟಿಯಟ್ಟಿ ಕಡಿಯದೆ ಇರುತ್ತಿರಲಿಲ್ಲ. ಆದರೆ ಈಗ ಅದರ ಗಮನವೆಲ್ಲಾ ರೋಜಿಯ ಮೇಲಿತ್ತು. ನನಗೆ ರಗಳೆಗಿಟ್ಟುಕೊಂಡಿತು. ಸ್ವಲ್ಪ ಹೊತ್ತು ಏನು ಮಾಡಬೇಕೋ ಗೊತ್ತಾಗಲಿಲ್ಲ.

ಆದರೆ ಮರುಕ್ಷಣದಲ್ಲಿಯೇ ಏನೋ ಮನಸ್ಸಿಗೆ ಹೊಳೆಯಿತು. ಹಾವನ್ನು ಗುಂಡಿನಿಂದ ಸುಟ್ಟುಬಿಡುವೆನೆಂದು ಭಾವಿಸಿದೆ. ಬಂದೂಕವನ್ನು ಎತ್ತಿ ಹಿಡಿದೆ ಆದರೇನು? ನನ್ನ ಕೈಯಲ್ಲಿರುವುದು ರೈಫಲ್! ಅದರ ಒಂದೊಂದು ತೋಟಾದಲ್ಲಿ ಒಂದೊಂದೇ ಗುಂಡಿರುವುದು. ಪ್ರಾಣಿ ದೊಡ್ಡದಾಗಿದ್ದರೆ ಸ್ವಲ್ಪ ಹೆಚ್ಚು ಕಡಿಮೆ ಗುರಿ ಬೀಳುವುದು. ಇಲ್ಲದಿದ್ದರೆ ಗುರಿತಪ್ಪಬಹುದು. ಇಲ್ಲಿ ಗುರಿ ತಪ್ಪಿದರೆ ಹಾವಿನ ಬದಲು ನಾಯಿ ಸಾಯಬಹುದು. ಅದರಲ್ಲಿಯೂ ಹಾವು ಹೆಡೆಯನ್ನು ಅತ್ತ ಇತ್ತ ನಿರಂತರವಾಗಿ ಒಲೆಯುತ್ತಲೇ ಇತ್ತು. ನಾಯಿಯೂ ಸುತ್ತಮುತ್ತ ತಿರುಗುತಿತ್ತು. ಆದ್ದರಿಂದ ಗುಂಡು ಹೊಡೆಯದೆ ಸ್ವಲ್ಪ ಕೈ ತಡೆದೆ ಇಷ್ಟರಲ್ಲಿ ಅನಾಹುತವು ಇನ್ನೂ ಹೆಚ್ಚಿತು. ನಾನು ಕೋವಿ

ಯನ್ನು ಎತ್ತಿದುದನ್ನು ಕಂಡೊಡನೆ ರೋಜಿಗೆ ಭೀಮಶಕ್ತಿ ಬಂದಂತಾಯಿತು. ಸರ್ಪದ ಮೇಲೆ ಇನ್ನೂ ಉಗ್ರತರವಾಗಿ ಎರಗತೊಡಗಿತು. ನನಗೆ ಏನು ಮಾಡಬೇಕೋ ಗೊತ್ತಾಗಲಿಲ್ಲ. ಕಂಗೆಟ್ಟಂತಾಯಿತು. ಕಡೆಗೆ ಏನಾದರೂ ಆಗಲಿ ಎಂದು ಹೆಡೆಗೆ ಗುರಿಯಿಡತೊಡಗಿದೆ. ಅದರ ಕಷ್ಟವನ್ನು ಬಲ್ಲವನೇ ಬಲ್ಲ. ಗುರಿಯಿಡಲಾಗಲಿಲ್ಲ. ಉರಗವು ಉಯ್ಯಾಲೆಯಂತೆ ತೂಗುತ್ತಿತ್ತು. ಇಳಿಸಿದ್ದ ಕೋವಿಯನ್ನು ಮತ್ತೆ ಮೇಲೆತ್ತಿದೆ. ದೇವರೇ ಗತಿಯೆಂದು ಈಡು ಹಾರಿಸಿಯೇ ಬಿಟ್ಟೆ. ನಾಯಿಯೂ ಸಾಯಲಿಲ್ಲ ಹಾವೂ ಸಾಯಲಿಲ್ಲ. ಗುಂಡು ಸುರಕ್ಷಿತವಾಗಿ ಅರಣ್ಯ ಪ್ರವೇಶ ಮಾಡಿತು. ಈಡಿನ 'ಢಂ'ಕಾರವು ಬೆಟ್ಟಗುಡ್ಡಗಳಿಂದ ಮರುದನಿಯಾಗಿ ಮೊಳಗಿತು. ಅನಾಹುತವು ಮತ್ತೂ ಹೆಚ್ಚಿತು. ನಾನು ಗುಂಡು ಹೊಡೆದ ಕೂಡಲೇ ಅದುವರೆಗೆ ಹಾವನ್ನು ಮೀಟ್ವಾಯ್ದು ಕಚ್ಚಲು ಹಿಂಜರಿಯುತ್ತಿದ್ದ ರೋಜಿಯು, ಹಾವಿಗೆ ಏಟು ಬಿತ್ತೆಂದು ತಿಳಿದು ಮೈಮೇಲೆ ಬಿದ್ದು ಒಂದು ಸಾರಿ ಹಾವನ್ನು ಕಚ್ಚಿ ಎಳೆಯಿತು. ಹಾವು ಬುಸುಗುಟ್ಟಿ ಎರಗಿತು. ದೈವವಶಾತ್ ನಾಯಿ ತಪ್ಪಿಸಿಕೊಂಡಿತು. ನಾನಂತೂ ಕಿಂಕರ್ತವ್ಯವಿಮೂಢನಾದೆನು. ಇನ್ನು ಹನ್ನೊಂದು ತೋಟಾಗಳಿದ್ದುವು ಕೋವಿಯ ಕೆಳಸಳಿಗೆಯಲ್ಲಿ. ಇನ್ನೊಂದು ನಿಮಿಷದ ಒಳಗೆ ಹನ್ನೊಂದು ಗುಂಡನ್ನು ಹಾರಿಸಬಹುದಿತ್ತು. ಆದರೆ ಪ್ರಯೋಜನವೇನು? ಹುಲಿಗೂ ಕೂಡ ರೈಫಲ್ಲಿನ ಒಂದೇ ಗುಂಡು ಸಾಕು. ಹಾವಿಗೆ ಹನ್ನೆರಡು ಗುಂಡು ಹೊಡೆದೆನೆಂದರೆ ಜನರು ಏನೆಂದಾರು? ಹನ್ನೆರಡನೆ ನಂಬರಿನ ತೋಟಾಕೋವಿಯಾಗಿದ್ದರೆ ಚರೆಯ ತೋಟಾಗಳಿರುತ್ತಿದ್ದುವು. ಒಂದನೆಯ ಈಡಿಗೇ ಹಾವು ನೆಲಕ್ಕುರುಳುತ್ತಿತ್ತು. ಅದನ್ನು ನೆನೆದು "ಅಯ್ಯೋ ಈ ಹಾಳು ರೈಫಲ್ಲನ್ನು ಏಕೆ ತಂದೆ?" ಎಂದುಕೊಂಡೆ. ಸರಿ, ಕೋವಿಯನ್ನು ಕೆಳಗಿಳಿಸಿ ಬಾಯಿಗೆ ಕೆಲಸಕೊಟ್ಟೆ. ರೋಜಿ ಎಂದಿಗಿಂತಲೂ ಹೆಚ್ಚಾಗಿ ಉರುಬೆಯಿಂದ ಉರವಣಿಸುತ್ತಿತ್ತು. "ಹಚಾ! ಹಛಾ!" ಎಂದು ಕೂಗಿದೆ. ಕಡೆಗೆ ಅತ್ತ ನೋಡಿ ಇತ್ತ ನೋಡಿ, ದೂರ ಎಲ್ಲಿಯೋ ಇದ್ದ ಹಿ—ಯ ಪರನ್ನು ಗಟ್ಟಿಯಾಗಿ ಕೂಗಿ ಕರೆಯತೊಡಗಿದೆ. ಹತ್ತು

ಹನ್ನೆರಡು ಸಾರಿ ಕಾಕು ಹಾಕಿ ಕೂಗಿದೆ.

ಪಾಪ, ಅವರು ನಿರುದ್ವೇಗದಿಂದ ಬರುತ್ತಿದ್ದವರು, ಇದ್ದಕ್ಕಿದ್ದ ಹಾಗೆ ನಾಯಿಯ ಆರ್ಭಟದಿಂದ ಕಿವಿ ನೆಟ್ಟಗೆ ಮಾಡಿಕೊಂಡಿದ್ದರು. ಅಷ್ಟು ಹೊತ್ತಿಗೆ ನನ್ನ "ಹಚಾ!' ಶಬ್ದ ಕೇಳಿಸಿತ್ತು. ಏನಿರಬಹು ದೆಂದು ಯೋಚಿಸುತ್ತಿರುವಷ್ಟರಲ್ಲಿಯೇ ಈಡಿನ 'ಢಂ'ಕಾರವೂ ಕೇಳಿ ಸಿತು. ಅಷ್ಟರಲ್ಲಿ ನಾನು ಕರೆಯುವುದು ಕೇಳಿಬಂತು. ಇದನ್ನೆಲ್ಲ ಹೇಳಲು ಇಷ್ಟೊಂದು ಹೊತ್ತಾದರೂ, ನಿಜವಾಗಿ ಎರಡುಮೂರು ನಿಮಿಷಗಳಲ್ಲಿಯೇ ಇಷ್ಟೆಲ್ಲ ಸಾಗಿತ್ತು. ಹಂದಿಯೋ, ಹುಲಿಯೋ ಏನಪಾಯವೋ ಎಂದು ಭಾವಿಸಿ ಗುಡ್ಡವನ್ನು ಏರಿ ಏರಿ ಏದುತ್ತ ಓಡಿಬಂದರು.

"ಬನ್ನಿ, ಬನ್ನಿ, ಬೇಗ ಬನ್ನಿ. ಅಲ್ಲಿ ನೋಡಿ. ನಾಗರಹಾವು ಹೆಡೆ ಯೆತ್ತಿ ನಿಂತಿದೆ. ಬೇಗ ಹೊಡೆಯಿರಿ ನಾಯಿ ಕೊಲ್ಲುತ್ತೆ." ಎಂದು ಬಿರುಬಿರನೆ ಅರಚಿಕೊಂಡೆ.

ಏದುತ್ತ ಬಂದವರು ನೋಡಿದರು. ಅವರ ಕೈಯಲ್ಲಿ ಹನ್ನೆರಡನೇ ನಂಬರಿನ ತೋಟಾಕೋವಿಯಿತ್ತು. ಅದರಲ್ಲಿ ಚರೆಯ ತೋಟಾಗಳು ಇದ್ದುವು. "ಹೊಡೆಯಿರಿ! ಹೊಡೆಯಿರಿ!" ಎಂದು ಕೂಗಿಕೊಂಡೆ. ಇಷ್ಟರಲ್ಲಿ ಕಾಡಿನಲ್ಲಿ ಅಲ್ಲಲ್ಲಿ ತಿರುಗುತ್ತಿದ್ದ ಇತರ ನಾಯಿಗಳೂ ಅಲ್ಲಿಗೆ ವೇಗವಾಗಿ ಓಡಿಬಂದುವು. ಸರಿ, ವ್ಯಾಪಾರ ಹೈಲಾಯಿತು. ಎಲ್ಲ ನಾಯಿಗಳೂ ಸೇರಿ ಹಾವನ್ನು ಮುತ್ತಿದುವು. ಆದರೆ ಸರ್ಪವು ಎಲ್ಲ ಕಡೆಗೂ ತನ್ನ ಹೆಡೆಯನ್ನು ಎರಗಿಸುತ್ತ ಸ್ವಸಂರಕ್ಷಣೆಯ ಕಾರ್ಯ ದಲ್ಲಿ ಇನ್ನೂ ಹೆಚ್ಚಾಗಿ ಮುತುವರ್ಜಿ ವಹಿಸಿಕೊಂಡಿತು. ಹಿ—ಬಹಳ ಪ್ರಯತ್ನಪಟ್ಟರು ನಾಯಿಗಳನ್ನು ತಪ್ಪಿಸಿ ಹಾವಿಗೆ ಈಡುತಗುಲಿಸ ಬೇಕೆಂದು, ಆದರೆ ಅಸಾಧ್ಯವಾಯಿತು. ಹಾವು ತನಗೆ ಬಂದ ಅಪಾ ಯವು ಪ್ರಬಲತರವಾಯಿತೆಂದು ತಿಳಿದು ಮೆಲ್ಲಗೆ ಪೊದೆಯ ಕಡೆಗೆ ಬರ ತೊಡಗಿತ್ತು. ಒಂದೆರಡು ಸಾರಿ ನಾಯಿಗಳು ಅದನ್ನು ಕಚ್ಚಿ ಎಳೆದೂಬಿಟ್ಟವು. ಅಂತೂ ಏನೋ ಬಂಡಾಟದಿಂದ ಹಾವು ಪೊದೆ ಯಲ್ಲಿದ್ದ ಬಿಲವನ್ನು ನುಗ್ಗಿತು. ಹಿ—ಯವರಿಗೆ ಗುಂಡು ಹೊಡೆ

ಯಲು ಅವಕಾಶ ದೊರೆಯಲೇ ಇಲ್ಲ. ಅಂತೂ ಹಾವೂ, ನಾವೂ, ನಾಯಿಗಳೂ ಎಲ್ಲರೂ ಗಂಡಾಂತರದಿಂದ ಪಾರಾದೆವು. ನಮ್ಮ ದೊಂಬಿಯ ಸದ್ದು ನಮ್ಮ ಮನೆಯವರೆಗೂ ಕೇಳಿಸಿತ್ತು. ಮೂರ್ತಿ, ವೆಂ—, ಗೋಪಾಲ ಎಲ್ಲರೂ ನಾವೇನೋ ಮಹಾಕಾರ್ಯಸಾಧನೆ ಯನ್ನೇ ಮಾಡಿರಬೇಕೆಂದು ಊಹಿಸಿ ನಮ್ಮ ಆಗಮನವನ್ನೇ ಕಾಯು ತ್ತಿದ್ದರು.

ಬೇಟೆಯನ್ನು ನಿಲ್ಲಿಸಿ ಮನೆಯ ಕಡೆಗೆ ಹೊರಟೆವು. ಆಗಲೇ ಎಳೆಬಿಸಿಲು ಬೆಳೆಬಿಸಿಲಾಗಿತ್ತು. ಹಿ— ನಾನೂ ಇಬ್ಬರೂ ನಡೆದ ವಿಚಾರವನ್ನೇ ಕುರಿತು ಮಾತಾಡುತ್ತ, ನಗುತ್ತ ನಡೆದೆವು. ದಾರಿ ಯಲ್ಲಿ ಒಂದು ಒಳಸಂಚು ಮಾಡಿದೆವು. ಏನೆಂದರೆ. ಮನೆಯಲ್ಲಿ ಎಲ್ಲರೂ ನಾಯಿಗಳ ಬೊಬ್ಬೆ, ನಮ್ಮ ಆರ್ಭಟ, ಗುಂಡಿನ ಸದ್ದು ಎಲ್ಲವನ್ನೂ ಆಲಿಸಿ ನಾವು ಹಂದಿಯನ್ನೋ ಹುಲಿಯನ್ನೋ ಸಂಧಿಸಿ ದೆವೆಂದು ತಿಳಿದಿರಬಹುದು. ನಾವು ಕೂಡ ಅವರ ಊಹೆಯನ್ನೇ ಸಮರ್ಥಿಸಿ ಮೊದಲು ಸುಳ್ಳು ಹೇಳಿ, ಕಡೆಗೆ ಗುಟ್ಟನ್ನು ಬಯಲು ಮಾಡಿ ನಗಬೇಕೆಂದು ನಿರ್ಣಯಿಸಿದೆವು ಅದಕ್ಕೆ ಬೇಕಾದ ಮುನ್ನುಡಿ ಸಂಭಾಷಣೆಗಳನ್ನು ತಯಾರು ಮಾಡಿಕೊಂಡೆವು.

ಮನೆಗೆ ಹತ್ತಿರ ಹತ್ತಿರ ಹೋದಾಗ ಹಂದಿಯನ್ನು ಕಂಡಿದ್ದರೆ ಹೇಗೆ ಮಾತಾಡುತ್ತಿದ್ದೆವೊ ಹಾಗೆಯೇ ಸಂಭಾಷಣೆ ಮಾಡತೊಡಗಿ ದೆವು. ಅದೂ ಬಾಗಿಲಲ್ಲಿ ಕಾಯುತ್ತಿದ್ದ ಎಲ್ಲರಿಗೂ ಕೇಳಿಸುವಂತೆ ಗಟ್ಟಿಯಾಗಿ ಮಾತಾಡಿದೆವು.

ನಾನು :—ನಾನೇನು ಮಾಡಲಿ? ಗುಂಡು ಹಾರಿಸುವುದರಲ್ಲಿ ಯೇ ಹಂದಿ ಹಾರಿಬಿಟ್ಟಿತು! ಹಾಳು ನಾಯಿ ಆ ರೋಜಿ ಇಷ್ಟೆಲ್ಲ ಅನಾಹುತಕ್ಕೆ ಕಾರಣ!

ಹಿ— ಸಾಕು. ಸಾಕು ಸುಮ್ಮನಿರಿ. ಕೈಯಲ್ಲಾಗದೆ ತಪ್ಪಿ ಹೊಡೆದು, ಈಗ ರೋಜಿಯ ಮೇಲೆ ತಪ್ಪುಹೊರಿಸಿ! ನಿವೇನು ಈಡು ಗಾರರೋ ನಾನು ಬೇರೆ ಕಾಣೆ. ಅಷ್ಟು ಹತ್ತಿರವಿದ್ದ ದೆವ್ವದಂಥ ಹಂದಿಯನ್ನು ಯಾರಾದರೂ ಗುರಿತಪ್ಪಿ ಹೊಡೆಯುವರೇ? ಕುರು.

ಡನು ಕೂಡ ಹೊಡೆಯಬಹುದಾಗಿತ್ತು.

ನಾನು :—ಮಹಾ, ನೀವೊಬ್ಬರೇ ಈಡುಗಾರರು! ಅದೇನು ಕಣ್ಣುಕೆರಳಿಸಿಕೊಂಡು, ಬೆನ್ನುಕೂದಲು ನೆಟ್ಟಗೆ ಮಾಡಿಕೊಂಡು, ಮೃತ್ಯು ನಿಂತ ಹಾಗೆ ನಿಂತಿದೆ! ನಾನೇನು ನುಗ್ಗಿ ಹೋಗಿ ಸಾಯ ಬೇಕಿತ್ತೇನು? ಹಂದಿ ಹೋದರೆ ಹೋಯಿತು. ಕಾಡಿನ ಜೀವಿ ಕಾಡಿ ಗಾಯಿತು!

ಇಷ್ಟರಲ್ಲಿ ಮೂರ್ತಿ ಹತ್ತಿರ ಓಡಿ ಬಂದು, "ಏನಾಯ್ತು?" ಎಂದು ಬಹಳ ಕುತೂಹಲದಿಂದ ಕೇಳಿದರು. ವಂ—, ದೂರದಿಂದಲೇ "ಓಹೋಹೋ! ಏನು ಬರಿಯಬಾಯಿ ಬೊಬ್ಬೆಯೋ? ಏನಾದರೂ ಕೆಲಸವಾಯಿತೋ?" ಎಂದನು.

ಹಿ— ಬಹಳ ರೇಗಿದಂತೆ ನಟಿಸಿ "ಇಂತಹರಕೂಡೆ ಬೇಟೆಗೆ ಹೋಗಬಾರದು. ಸತ್ತ ಹಂದಿಗೂ ಕೂಡ ಹೊಡೆಯಲಾರದ ಜನರು" ಎಂದು ಹುಬ್ಬು ಗಂಟುಹಾಕಿಕೊಂಡರು.

ಮೂರ್ತಿ.—ಏನ್ರೀ ಅದು ಸ್ವಲ್ಪ ಹೇಳ್ರೀ.

ನಾನು —ಯಾಕಪ್ಪಾ, ಈ ಗಲಾಟೆ! ನಾನೇ ಹೇಳಿಬಿಡುತ್ತೇನೆ. ಹಂದಿ ಕಂಡೆ. ಈಡು ಹೊಡೆದೆ ತಪ್ಪಿಹೋಯಿತು.

ವೆಂ—"ಧೂ ನಿನ್ನ!" ಎಂದು ಕೈಚಪ್ಪಾಳೆ ಹೊಡೆದು ನಕ್ಕನು.

ಹಿ—ಇದ್ದಕ್ಕಿದ್ದ ಹಾಗೆ ಬಹಳ ಗಂಭೀರವಾಗಿ "ಇಲ್ಲಪ್ಪಾ ಹಂದಿ ಬಿತ್ತು. ತಮಾಷೆ ಮಾಡೋಣ ಎಂದು ಹಾಗೆ ಹೇಳಿದೆವು" ಎಂದರು. ಎಲ್ಲರೂ ಬಹಳ ಗಂಭೀರವಾದರು. ಹಾಸ್ಯಮಾಡುತ್ತಿದ್ದ ವೆಂ— "ಎಲ್ಲಿ? ನೋಡೋಣ ಬನ್ನಿ!" ಎಂದು ಹೇಳುತ್ತ ಬಹಳ ಉತ್ಸಾಹದಿಂದ ಹೊರಡಲನುವಾದನು. ಮೂರ್ತಿಗೆ ಬಹಳ ಆನಂದ ವಾಯಿತು.

ನಾನು :—ನಿಮಗೇನು ಹುಚ್ಚೇನ್ರೀ! ಹಂದಿ ಎಂದೋ ಮನೆಗೆ ಹೋಯಿತು. ಗುರಿತಪ್ಪಿ ಹೋಯಿತು. ಅವರು ನಿಮ್ಮನ್ನು ಲೇವಡಿ ಮಾಡುತ್ತಿದ್ದಾರೆ.

ಪಾಪ, ಅವರೆಲ್ಲ ಕಂಗಾಲಾಗಿ ಹೋದರು. ನಿಜಾಂಶವು ಹಂದಿ

ಬಿದ್ದಿದ್ದರಲ್ಲಿ, ಇಲ್ಲವೇ ಹೋಗಿದ್ದರಲ್ಲಿ, ಇವೆರಡರಲ್ಲಿಯೇ ಇರಬೇಕೆಂದು ನಿರ್ಧರಿಸಿದರು. ಅಂತೂ ಸ್ವಲ್ಪ ಹೊತ್ತು ಹಾಗೆ ಹೀಗೆ ಆಟ ಆಡಿಸಿ, ಹೊಡೆದಿದ್ದೇನೋ ಹಂದಿಯೇ ಹೌದು, ಆದರೆ ಗುರಿತಪ್ಪಿ ಹೋಯಿತು ಎಂಬುದನ್ನೇ ಕೇವಲ ಸತ್ಯವನ್ನಾಗಿ ಅವರು ತಿಳಿಯುವಂತೆ ಮಾಡಿಬಿಟ್ಟೆವು ಎಲ್ಲರೂ ನನ್ನನ್ನು ಹಂಗಿಸಿದರು. ಮೂರ್ತಿ "ಏನ್ರೀ, ಮೈಸೂರಿನಲ್ಲಿ ನನ್ನೊಡನೆ 'ನಾನು ದೊಡ್ಡ ಬೇಟೆಗಾರ, ಬಹಳ ದೊಡ್ಡ ಗುರಿಗಾರ' ಎಂದು ಕೊಚ್ಚಿಕೊಳ್ಳುತ್ತಿದ್ದಿರಿ!" ಎಂದು ಬಹಳ ಲೇವಡಿ ಮಾಡಿದರು. ನಾನು ಒಳಗೊಳಗೇ ನಗುತ್ತ ಅವರನ್ನು ಕೆಣಕುತ್ತಿದ್ದೆ, ಸುಳ್ಳಿಗೆ ಸುಳ್ಳು ಹೇರಿ!

ಆ ದಿನ ಮಧ್ಯಾಹ್ನ ಊಟಮಾಡಿದ ಮೇಲೆ ಮರಳಿ ಬೆಳಗಿನ ಕತೆಯನ್ನೇ ಎತ್ತಿದೆವು. ನಾನು ಹಂದಿ ನಿಂತಿದ್ದ ಭಂಗಿ, ರೋಜಿ ಕೂಗಿದ ರೀತಿ, ನಾನು ಹೊಡೆದ ವಿಧಾನ ಎಲ್ಲವನ್ನೂ ಅಭಿನಯಿಸಿ ವರ್ಣಿಸಿ ಕಡೆಗೆ "ಗುಂಡು ಹಾರಿಸಿ ನೋಡುತ್ತೇನೆ! ಏನು ನೋಡುವುದು? ಹಂದಿ ಮಾಯವಾಗಿ ಹಾವು ಹೆಡೆಯೆತ್ತಿ ನಿಂತಿತ್ತು!" ಎಂದೆನು. ಹಿ—ಗಹಗಹಿಸಿ ನಕ್ಕರು. ಮೊದಲು ನಗುತ್ತಿದ್ದವರು ಮುಖಭಂಗವಾದಂತಾಗಿ ಮತ್ತೂ ನಕ್ಕರು ಒಳಸಂಚನ್ನೆಲ್ಲ ಒಡೆದು ಹೇಳಿದೆವು.

ಇಂತು ಪ್ರಾತಃಕಾಲದಲ್ಲಿ ಕಷ್ಟಪಟ್ಟು ತಯಾರು ಮಾಡಿದ ಹಾಸ್ಯದ ಚಟಾಕಿಯನ್ನು ಊಟಮಾಡಿದ ಮೇಲೆ ಹಾರಿಸಿದೆವು.

---

# ಕಾಡಿನಲ್ಲಿ ಕಳೆದ ಒಂದಿರುಳು

ಸಂಜೆಗೆ ಮುನ್ನವೇ ಊಟಮಾಡಿದೆವು. ಒಬ್ಬೊಬ್ಬರು ಎರಡೆರಡು ಹೆಗ್ಗಂಬಳಿಗಳನ್ನು ಹೆಗಲ ಮೇಲೆ ಹಾಕಿಕೊಂಡು, ತೋಟಾ ಕೋವಿಗಳನ್ನು ಹಿಡಿದುಕೊಂಡು ಮನೆಯಿಂದ ಹೊರಟು ಕಾಡಿನ ಕಡೆಗೆ ನಡೆದೆವು. ನಮ್ಮ ಹಣ್ಣಿನ ಮರದ ಅಟ್ಟಣೆಯು ಮನೆಯಿಂದ ದೂರ ಅರಣ್ಯದ ನಡುವೆಯಿತ್ತು. ಕತ್ತಲಾದ ಮೇಲೆ ಕಾಡಿನಲ್ಲಿ ದಾರಿ ಹುಡುಕುವುದು ಕಷ್ಟವೆಂದು ತಿಳಿದು ಸ್ವಲ್ಪ ಮುಂಚಿತವಾಗಿಯೇ ಹೊರಟಿದ್ದೆವು.

ಸಾಯಂಕಾಲವಾಗಿದ್ದರೂ ನೇಸರು ಇನ್ನೂ ಮುಳುಗಿರಲಿಲ್ಲ. ನಾವು ಬೆಟ್ಟವೇರಿದೆವು, ಮೊದಲು ಆಗ್ನೇಯಮುಖವಾಗಿ, ತರುವಾಯ ಈಶಾನ್ಯದ ಕಡೆಗೆ. ಬನಗಳೆಲ್ಲ ಬೈಗುಗೆಂಪಿನಿಂದ ತೊಯ್ದು ಹೋಗಿದ್ದುವು. ಮುಕ್ಕಾಲು ಮೂರುವೀಸ ಪಾಲು ಹಕ್ಕಿಗಳೆಲ್ಲ ಗೊತ್ತುಸೇರಿದ್ದುವು. ಎಲ್ಲಿಯೋ ಒಂದೆರಡು 'ಕಾಜಾಣ'ಗಳು ಆಲಾಪನೆ ಮಾಡುತ್ತಿದ್ದುವು. ಪಡುವಣ ದೆಸೆಯ ಕೆಮ್ಮುಗಿಲು ನೋಡುವುದಕ್ಕೆ ಮನೋಹರವಾಗಿದ್ದರೂ ಕಾಲವಿಳಂಬವಾದರೆ ಕಷ್ಟಕ್ಕೆ ಈಡಾಗುವೆವೆಂದು ತಿಳಿದು ಬೇಗ ಬೇಗನೆ ಮುಂದಳೆದೆವು. ನಾವು ಮುಂದರಿದಂತೆಲ್ಲ ಕಾಂತಿಯು ಹೀನವಾಗುತ್ತ ಕಡೆಗೆ ಮುಚ್ಚಂಜೆಯ ಮಬ್ಬು ಕವಿಯಿತು. ಸೂರ್ಯನೂ ಮಲೆನಾಡಿನ ಉನ್ನತ ಗಿರಿ ವನ ಶ್ರೇಣಿಗಳ ಶಿಖರ ಪ್ರಾಂತದಿಂದ ಪಡುಗಡಲಿಗೆ ಉರುಳಿಬಿಟ್ಟನು. ಎಲ್ಲ ನಸುಗಪ್ಪಾಯಿತು.

ಬೇಗ ಬೇಗನೆ ನಡೆದೆವು. ಅರಣ್ಯವು ನಿಬಿಡತರವಾದಂತೆಲ್ಲ ಮೆಲ್ಲ ಮೆಲ್ಲನೆ ಮಾತಾಡತೊಡಗಿದೆವು. ಹೊದರುಗಳ ನಡುವೆ, ಇಲ್ಲದ ಹಾದಿಯನ್ನು ಊಹಿಸಿ ಧಾವಿಸಿದೆವು. ಬನಗತ್ತಲು ಹೆಚ್ಚುತ್ತಿತ್ತು. ಮುಡಿಗೆದರಿ ನಿಂತ ಎತ್ತರವಾದ ಹೆಮ್ಮರಗಳ ನಡು ನಡುವೆ ತಾರಕಿತ ನೀಲಾಕಾಶವು ಅಲ್ಲಲ್ಲಿ ಗೋಚರವಾಗುತಿತ್ತು. ದಾರಿಗೆ ಅಡ್ಡವಾಗಿ ಬೆಳೆದ

ಮುಳ್ಳುಬಳ್ಳಿಗಳನ್ನು ಎಡವುತ್ತ ಗುಡ್ಡವೇರಿದೆವು. ಕಾಡಿನೊಳಗೆ ಹೋದಂತೆಲ್ಲ ತಿಮಿರದೊಡನೆ ಮೌನವೂ ಇಮ್ಮಡಿಯಾಯಿತು. ಜೊತೆಗೆ ಒಂದು ವಿಧವಾದ ಭಯವೂ ಪ್ರೇತದಂತೆ ನಮ್ಮ ಸುತ್ತಲೂ ಸುಳಿದಾಡಿತು.

ನಾವು–ನಾನು, ತಿಮ್ಮು, ಓಬು–ನಮ್ಮ ಗೊತ್ತುಗಳನ್ನು ಸೇರಿದಾಗ ಎಲ್ಲ ಕಪ್ಪಾಗಿಹೋಗಿತ್ತು. ಪಿಸುಮಾತುಗಳಿಂದ ಒಬ್ಬರನ್ನೊಬ್ಬರು ಬೀಳ್ಕೊಂಡೆವು. ಒಬ್ಬರಿಗೊಬ್ಬರು ಎಚ್ಚರಿಕೆ ಹೇಳಿದೆವು. ಒಬ್ಬರಿಗೊಬ್ಬರು ಧೈರ್ಯ ಹೇಳಿದೆವು. ಆದರೆ ನಿಜವಾಗಿಯೂ ಒಬ್ಬರಿಗೆ ಇನ್ನೊಬ್ಬರ ಧೈರ್ಯವಾಗಿತ್ತೇ ಹೊರತು ಧೈರ್ಯ ಒಬ್ಬರಲ್ಲಿಯೂ ಇರಲಿಲ್ಲವೆಂದೇ ತೋರುತ್ತದೆ.

ನಮ್ಮ ಹಣ್ಣಿನ ಮರವು ಒಂದು ದೊಡ್ಡ ಕಾಡುಮಾವಿನ ಮರವಾಗಿತ್ತು. ಅದರ ಸುತ್ತಮುತ್ತಲಿದ್ದ ಮರಗಳಲ್ಲಿ ಅಟ್ಟಣೆಗಳನ್ನು ಕಟ್ಟಿದ್ದೆವು. ನನಗೂ ತಿಮ್ಮುಗೂ ಸುಮಾರು ಇಪ್ಪತ್ತು ಗಜ ದೂರ; ನನಗೂ ಓಬುಗೂ ಸುಮಾರು ಹದಿನೈದು ಗಜ ದೂರ. ಆದರೂ ಆ ಮಾರಿ ಕಾಡಿನಲ್ಲಿ ಜೊತೆಯವರು ಒಂದು ಮಾರು ದೂರವಿದ್ದರೂ ಹರಿದಾರಿ ದೂರವಿದ್ದಂತೆಯೇ ಭಾಸವಾಗುವುದು. ನಾನು ನನ್ನ ಅಟ್ಟಣೆಯಿದ್ದ ಮರದ ಬುಡವನ್ನು ಸೇರಿ, ಮೊದಲು ಕಂಬಳಿಗಳನ್ನು ತೆಗೆದುಕೊಂಡು ಬಹು ಶ್ರಮದಿಂದ ಮೇಲೇರಿ ಅಟ್ಟಣೆಯಲ್ಲಿಟ್ಟು ಮರಳಿ ಕೆಳಗಿಳಿದೆ. ಕೋವಿಯಲ್ಲಿದ್ದ ತೋಟಾಗಳನ್ನು ತೆಗೆದು ಜೇಬಿಗೆ ಹಾಕಿಕೊಂಡು, ಬಂದೂಕನ್ನು ಕುತ್ತಿಗೆ ಕೌಂಕುಳುಗಳ ಸಹಾಯದಿಂದ ಭದ್ರವಾಗಿ ಹಿಡಿದುಕೊಂಡು, ಮರವನ್ನೂ ಜೀವವನ್ನೂ ಕೈಯಲ್ಲಿ ಹಿಡಿದುಕೊಂಡು ಅಟ್ಟಣೆಗೇರಿದೆ. ಅಲ್ಲಿ ಸ್ವಲ್ಪ ಹೊತ್ತು ಸಿಟ್ಟುಸಿರೆಳೆದು ಎದೆಯ ಬಡಿತವು ಸ್ವಲ್ಪ ಕಡಿಮೆಯಾದಮೇಲೆ ಒಂದು ಕಂಬಳಿಯನ್ನು ಹಾಸಿದೆ, ಇನ್ನೊಂದನ್ನು ಹೊದೆಯಲು ಇಟ್ಟೆ. ಜೇಬಿನಲ್ಲಿದ್ದ ಒಂದು ಚಿಕ್ಕ ಕಾಫಿಯ ಶೀಸೆಯನ್ನು ತೆಗೆದು ಒಂದು ಮೂಲೆಯಲ್ಲಿಟ್ಟೆ. ಇಟ್ಟವನು ಹಾಗೆಯೇ ಎತ್ತಿಕೊಂಡು ಸ್ವಲ್ಪ ಕಾಫಿಯನ್ನು ಬಾಯಿಗೆ ಸುರಿದು

ಕೊಂಡೆ. ಆ ಕತ್ತಲಲ್ಲಿ ಗುರಿ ತಪ್ಪಿ ಮೂಗಿಗಿಷ್ಟು ಹೋಯಿತು. ಕಾಡಿನಲ್ಲಿ ಬೇಟೆಗೆ ಹೋದಾಗ, ಅದರಲ್ಲಿಯೂ 'ಮರಸಿ'ಗೆ ಹೋದಾಗ ಸ್ವಲ್ಪವೂ ಸದ್ದು ಮಾಡಬಾರದು. ಪ್ರಾಣಿಗಳಿಗೆ ಮನುಷ್ಯರಿರುವ ಸೂಚನೆ ಹೊಳೆದರೆ ಸಾಕು ಆ ಎಡೆಗೆ ಕಾಲಿಡುವುದೇ ಇಲ್ಲ. ಈ ವಿಚಾರವನ್ನು ಹಿರಿಯರಿಂದ ಕೇಳಿಯೂ ಇದ್ದೆ. ಹಿಂದೆ ಅನುಭವದಿಂದ ಅರಿತೂ ಇದ್ದೆ. ಆದರೇನು ಮಾಡುವುದು; ಹಾದಿ ತಪ್ಪಿದ ಕಾಫಿ ಶ್ವಾಸಕೋಶದ ಮಾರ್ಗವನ್ನು ಹಿಡಿದುಬಿಟ್ಟಿದ್ದರಿಂದ, ಸೀನು ಕೆಮ್ಮು ಎಲ್ಲ ಒಟ್ಟಿಗ ಬಂದುವು. ನಾನೂ ತಡೆದೆ, ತಡೆದೆ; ಕಡೆಗೆ ತಡೆದಷ್ಟೂ ಪ್ರಬಲವಾಗಿ ಟಗರಿನಂತೆ ಸೀನಿ, ಕೆಮ್ಮಿಯೂ ಬಿಟ್ಟೆ! ಕಾಡಿನಲ್ಲಿ ಕಡ್ಡಿ ಮುರಿದರೂ ದೊಡ್ಡ ಸದ್ದಾಗುವುದು. ಮೌನ ಸರೋವರಕ್ಕೆ ಸ್ವಸಮುಹಿಷವು ಧುಮ್ಮಿಕ್ಕಿದಂತಾಗಿ ಒಂದು ಸಾರಿ ಕಾಡೆಲ್ಲ ಅಲ್ಲೋಲಕಲ್ಲೋಲವಾದಂತಾಯಿತು. ನಾನು ಮಾಡಿದ ತಪ್ಪಿನ ಮಹತ್ತು ನನಗಾಗ ಗೊತ್ತಾಗಲಿಲ್ಲ. ಬೆಳಿಗ್ಗೆ ಗೊತ್ತಾಯಿತು. ಒಬ್ಬ ಕುಳಿತು ಎರಡು ನಿಮಿಷವಾಗುವುದರೊಳಗೆ ಒಂದು ಕಣೆಹಂದಿಯು ಹಿಂಡು ಹಣ್ಣಿನ ಮರಕ್ಕಾಗಿ ಬರುವುದನ್ನು ಕಂಡು, ಆ ಕತ್ತಲಲ್ಲಿ ಬಹಳ ಶ್ರಮದಿಂದ ಗುರಿಯಿಡುತ್ತಿದ್ದನಂತೆ. ನಾನು ಸೀನಿದ ಹೊಡೆತಕ್ಕೆ ಅವುಗಳೆಲ್ಲ ಕಾಲಿಗೆ ಬುದ್ಧಿ ಹೇಳಿಬಿಟ್ಟವಂತೆ. ಅವನಿಗೆ ನನ್ನ ಮೇಲೆ ಬಹಳ ಸಿಟ್ಟಾಗಿ ಶಪಿಸಿಬಿಟ್ಟನಂತೆ, ಮನದಲ್ಲಿಯೇ.

ಹುಣ್ಣಿಮೆಯಾಗಿ ಆಗಲೇ ಎರಡು ದಿನಗಳಾಗಿದ್ದುವು. ಅದರಲ್ಲಿಯೂ ಚಂದ್ರನು ಪರ್ವತಗಳನ್ನು ಏರಿ ಮೇಲೆ ಬರುವುದು ಸ್ವಲ್ಪ ಹೊತ್ತು. ಆ ರಾತ್ರಿ ಸುಮಾರು ಹನ್ನೊಂದು ಗಂಟೆಯಾಯಿತೆಂದು ತೋರುತ್ತದೆ ಅವನು ಕಾಣಿಸಿಕೊಳ್ಳಲು. ಅಂತೂ ಕಗ್ಗತ್ತಲೆ ಕವಿದಿತ್ತು. ಕಾಡಿನಲ್ಲಿ ಕಗ್ಗತ್ತಲೆ ಎಂದರೆ ಹೇಗಿರುವುದೆಂಬುದನ್ನು ಅನುಭವದಿಂದ ತಿಳಿಯಬೇಕಲ್ಲದೆ ಬಣ್ಣಿಸಿದರೆ ಸಾಲದು. ಗಿಡ ಮರಗಳೆಲ್ಲ ಕತ್ತಲಲ್ಲಿ ಕರಗಿಹೋಗಿದ್ದುವು. ಸಮಸ್ತ ವಿಶ್ವವೂ ತಿಮಿರಬ್ರಹ್ಮ ಸಮಾಧಿಯಲ್ಲಿ ಲೀನವಾದಂತಿತ್ತು. ದೇಹದ ಅನುಭವವು ಕೂಡ ಇರಲಿಲ್ಲ. 'ನಾನು' ಎಂಬ ಅಹಂಕಾರ ಭಾವವೊಂದೇ ಉಳಿದಿತ್ತು. ಆ ಮೌನವೂ ಕೂಡ ಕತ್ತಲೆಗೆ ಸರಿಸಮವಾಗಿಯೇ ಇತ್ತು. ಮುಟ್ಟಿ ಅನುಭವಿಸಬಹುದು

ಎಂಬಂತಿತ್ತು. ಕ್ರಿಮಿಕೀಟಗಳ ಏಷಣ್ಣಗಭೀರ ಧ್ವನಿಯೂ ಕೂಡ ಮೌನವನ್ನು ಮತ್ತಿಸಿತು ಕೆಣಕಿ ರೇಗಿಸುವಂತಿತ್ತು. ಬಹು ದೂರ ಕೆಳಗಡೆ ನಮ್ಮ ಮನೆಯಲ್ಲಿ ಬಗುಳುವ ನಾಯಿಯ ಕೂಗಿನಿಂದ ಮೌನವು ಮಿಂಚಿದಂತಾಗುತ್ತಿತ್ತು. ದೂರ ಬಯಲಿನಲ್ಲಿ ಇರುಳ್ವಕ್ಕಿಯೊಂದರ ವಿಕಟ ನಿರ್ಘೋಷವು ಕರ್ಕಶವಾಗಿ ಕೇಳಿ ಬಂದು ಭಯವನ್ನು ಭಯಂಕರವನ್ನಾಗಿ ಮಾಡುತಿತ್ತು. ಒಂದೊಂದು ಸಾರಿ ಕಣ್ಣಿಗೆ ಏನೇನೋ ವಿಕಾರ ಸ್ವರೂಪಗಳು ಕಾಣಿಸಿದಂತಾಗಿ ಪುನಃ ಕತ್ತಲಲ್ಲಿ ಕರಗುತ್ತಿದ್ದುವು. ಕೋವಿಗೆ ಪುನಃ ತೋಟಾಗಳನ್ನು ಹಾಕಿ ತುಸು ಹೊತ್ತು ಕುಳಿತುಕೊಂಡೆ. ಆ ಕತ್ತಲಲ್ಲಿ, ಆ ಮೌನದಲ್ಲಿ ಮೂರ್ಛೆಹೋಗಿದ್ದ ವನಪ್ರದೇಶವನ್ನು ಶೂನ್ಯದೃಷ್ಟಿಯಿಂದ ನೋಡಿ ನೋಡಿ ನನಗೂ ಬೇಸರವಾಯಿತು; ತಲೆ ಚಿಟ್ಟುಹಿಡಿಯಿತು; ತುಂಬಾ ರೇಜಿಗೆಯಾಯಿತು. ಚಂದ್ರನು ಮೂಡುವ ವರೆಗೆ ಸ್ವಲ್ಪ ಮಲಗುವೆನೆಂದು ಬಗೆದು, ಕೋವಿಯನ್ನೇ ತಲೆದಿಂಬನ್ನಾಗಿ ಮಾಡಿಕೊಂಡು ಕಂಬಳಿಯನ್ನು ಮೈಮೇಲೆ ಎಳೆದುಕೊಂಡು ಮಲಗಿದೆ. ಹಾಗೆಯೇ ಜೊಂಪು ಹತ್ತಿತು.

ತುಸು ಹೊತ್ತಿನಲ್ಲಿಯೇ ಯಾವುದೋ ಒಂದು ಸದ್ದಿನಿಂದ ಎಚ್ಚರವಾಯಿತು. ಮಲಗಿದ್ದ ಹಾಗೆಯೇ ಕಣ್ದೆರೆದೆ. ಅದೇ ಕಗ್ಗತ್ತಲೆ, ಕಣ್ಣಿರಿಯುವಂತಿತ್ತು. ಅದೇ ಮೌನ, ಮೂರ್ಛೆಗೊಳಿಸುವಂತಿತ್ತು. ಕಿವಿಗೊಟ್ಟು ಆಲಿಸಿದೆ ನಾನು ಕುಳಿತಿದ್ದ ಮರದ ಬುಡದಲ್ಲಿ ಏನೋ ಸರಸರ ಸದ್ದಾದಂತಾಯಿತು. ಒಡನೆಯೇ ಭಯಂಕರವಾದ ಹೂಂಕೃತಿಗಳು ಕತ್ತಲೆಯ ಕಡಲಿನಲ್ಲಿ ತರಂಗತರಂಗವಾಗೆದ್ದುವು. ಮೊದಲು ನನಗೆ ಪ್ರಾಣಿ ಯಾವುದೆಂದು ಬಗೆ ಹರಿಯಲಿಲ್ಲ. ರಕ್ತನಾಳಗಳಲ್ಲಿ ಉದ್ವೇಗದ ಪ್ರವಾಹವು ಸಂಚರಿಸಿತು. ಮೆಲ್ಲನೆ, ಬಹಳ ಜಾಗರೂಕತೆಯಿಂದ, ಸ್ವಲ್ಪವೂ ಸದ್ದುಮಾಡದೆ ಅಟ್ಟಣೆಯಲ್ಲಿ ಎದ್ದುಕುಳಿತುಕೊಂಡೆ. ಹಾಗೆಯೇ ಬಂದೂಕನ್ನು ಕೈಲಿ ಕೆಗೆದುಕೊಂಡೆ. ಪ್ರಾಣಿಯು ಮಾವಿನ ಹಣ್ಣನ್ನು ಅಗಿಯುವ ಸದ್ದಾಯಿತು. ನೆಲವನ್ನು ಮೂತಿಯಿಂದ ಉಳುವ ಸದ್ದಾಯಿತು. ಜಂತುವು ವನವರಾಹವೆಂದು ನಿರ್ಧರಿಸಿದೆ. ಅದರ ಆಟೋಪದಿಂದ ಬಹು ದೊಡ್ಡ ಪ್ರಾಣಿಯಾಗಿರಬೇಕೆಂದೂ ಊಹಿಸಿದೆ.

ನನಗೂ ಅದಕ್ಕೂ ಇಪ್ಪತ್ತು ಅಡಿಗಳ ದೂರವಿರಬೇಕೆಂದು ನಿರ್ಣಯಿಸಿದೆ. ಏಕೆಂದರೆ, ನಾನು ಕುಳಿತ ಅಟ್ಟಣೆಯು ಸುಮಾರು ಮೂವತ್ತು ಮೂವತ್ತೈದು ಅಡಿಗಳಷ್ಟು ಎತ್ತರವಿದ್ದರೂ ಬೆಟ್ಟವು ಇಳಿಜಾರಾಗಿದ್ದುದರಿಂದ ಓರಯಲ್ಲಿ ಮೇಯುತ್ತಿದ್ದ ಸೂಕರವು ನಿಕಟಸ್ಥವಾಗಿಯೇ ಇತ್ತು. ನನಗಿದ್ದ ನಯನೇಂದ್ರಿಯ ಶಕ್ತಿಯನ್ನೆಲ್ಲ ಉಪಯೋಗಿಸಿ ಸದ್ದಾಗುತ್ತಿದ್ದ ಕಡೆಗೆ ನೋಡಿದೆ. ಘನೀಭೂತವಾದ ಘೋರಾಂಧಕಾರವು ಕಾಳಪಾಷಾಣಭಿತ್ತಿಯೋಪಾದಿಯಲ್ಲಿ ನನ್ನೆದುರು ನಿಂತಿತ್ತು. ವಸ್ತು ಮಾತ್ರವಾದರೂ ಗೋಚರಿಸಲಿಲ್ಲ.

ಮುಂದೇನು ಮಾಡುವುದೆಂದು ಯೋಚಿಸಿದೆ. ತಿಲಮಾತ್ರವಾದರೂ ಬೆಳಕಿದ್ದರೆ ಅನಾಯಾಸವಾಗಿ ಪ್ರಾಣಿಯನ್ನು ಸುಟ್ಟುಬಿಡಬಹುದಾಗಿತ್ತು. ಎಲ್ಲಿಯಾದರೂ ಏನಾದರೊಂದು ಸೂಚನೆ ಸಿಗಬಹುದೆಂದು ಹಾರೈಸಿ ಕಣ್ಣು ದಣಿಯುವಂತೆ ಈಕ್ಷಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಹತಾಶನಾಗಿ ಕುಳಿತುಬಿಟ್ಟೆ. ಮನಸ್ಸಿನಲ್ಲಿಯೇ ಅಯ್ಯೋ ಎಂದುಕೊಂಡೆ ತರುವಾಯ ಈ ರೀತಿ ಸಮಾಧಾನ ಮಾಡಿಕೊಂಡೆ; ಪ್ರಾಣಿಯು ಹಣ್ಣುತಿನ್ನುತ್ತ ಇದ್ದರೆ ಸ್ವಲ್ಪಹೊತ್ತಿನಲ್ಲಿಯೇ ಚಂದ್ರೋದಯವಾಗುವುದು, ಆಗ ಸುಲಭವಾಗಿ ಸುಡಬಹುದು, ಎಂದು ಯೋಚಿಸಿ ಕಾದೆ. ಆದರೆ ಮನಸ್ಸು ತಾಳ್ಮೆಯಿಂದಿರಲಿಲ್ಲ. ಇದರರ್ಥವನ್ನು ಬೇಟೆಗಾರರು ಚೆನ್ನಾಗಿ ತಿಳಿಯಬಹುದು. ಕೈಯಲ್ಲಿ ಬಂದೂಕಿರುವಾಗ, ಜಂತು ಸಮೀಪದಲ್ಲಿರುವಾಗ, ಇಂದ್ರಿಯಗಳನ್ನೆಲ್ಲ ನಿಗ್ರಹಿಸಿದ ಎಂತಹ ತತ್ತ್ವಜ್ಞಾನಿಯಾದ ಬೇಟೆಗಾರನಾದರೂ ಕುದಿಯದಿರುವುದಿಲ್ಲ ರಜೋಗುಣವು ಉದ್ದೀಪನವಾಗಿ ಏಲಯರುದ್ರ ಸ್ವಭಾವವು ತಲೆದೋರುವುದು. ಸಂಹಾರ ಲೋಲುಪತೆಯುಂಟಾಗುವುದು. ಕಾರ್ಯಶಕ್ತಿಯು ಇಮ್ಮಡಿಸುವುದು ಧಮನಿಗಳಲ್ಲಿ ಭೈರವ ರಕ್ತಧುನಿಯು ಬೇಸಗೆಗಾಲದ ಹೆಬ್ಬುಲಿಯಂತೆ ತಾಂಡವವಾಡುವುದು. ಮನುಷ್ಯನು ಶ್ಮಶಾನದ ಕಾಪಾಲಿಕನಾಗುವನು. ಅಂತೂ ನನಗೆ ತಾಳ್ಮೆ ತಪ್ಪಿತು. ಸದ್ದು ಬರುವ ತಾವನ್ನು ಊಹಿಸಿ ಗುರಿಯಿಟ್ಟು ಈಡು ಹಾರಿಸುವೆನೆಂದು ನಿರ್ಣಯಿಸಿದೆ. ಮತ್ತೆ ಸ್ವಲ್ಪ ಅಳುಕಿದೆ. ಏಕೆಂದರೆ, ಸರಿಯಾಗಿ

ಪರೀಕ್ಷಿಸದೆ ಗುಂಡು ಹೊಡೆದು ಎಷ್ಟೋ ಜನ ಬೇಟೆಗಾರರು ಕೊಲ್ಲ ಬಾರದ ಜಂತುಗಳನ್ನೂ, ಗೋವುಗಳನ್ನೂ ಕೂಡ ಹೊಡೆದುಬಿಟ್ಟಿದ್ದಾರೆ. ಆದನ್ನು ಯೋಚಿಸಿಕೊಂಡು ಸ್ವಲ್ಪ ಸುಮ್ಮನಾದೆ ತಿಂಗಳು ಮೂಡುವ ಚಿಹ್ನೆಯಾದರೂ ಇದೆಯೋ ಎಂದು ಗಗನಪರ್ಯಂತವಾಗಿ ಮೇಲೇರಿದ ಗಿರಿಯನ್ನು ನೋಡಿದೆ. ಎಲ್ಲ ತಿಮಿರತಲ್ಲೀನವಾಗಿ ಹೋಗಿತ್ತು. ಅಷ್ಟರಲ್ಲಿ ವರಾಹವು ಗಾಳಿ ಹಿಡಿಯುವ ಸದ್ದು ಕೇಳಿಸಿತು. ನಿಶ್ವಾಸೋಚ್ಛ್ವಾಸಗಳು ತಿದಿಯೊತ್ತಿದಂತೆ ಕೇಳಿಸಿದುವು. ಮನುಷ್ಯರ ವಾಸನೆಯು ಅದಕ್ಕೆ ಗೊತ್ತಾಯಿತೆಂದು ತೋರುತ್ತದೆ. ಒಂದೇ ಸಾರಿ ಹೂಂಕಾರ ಮಾಡುತ್ತ, ಗಿಡ ಮರಗಳನ್ನು ಮುರಿ ಮುರಿದು ಬೆಟ್ಟದ ನೆತ್ತಿಯಿಂದ ತಪ್ಪಲಿಗುರುಳುವ ಹೆಬ್ಬಂಡೆಯಂತೆ ಆ ವನ ಸೂಕರವು ಧಢ ಧಢ ಎಂದು ಧಾವಿಸಿಬಿಟ್ಟಿತು. ಅದು ಅಡಿಯಿಟ್ಟ ರಭಸಕ್ಕೆ ಕಾಡು ಗುಡ್ಡವೆಲ್ಲ ವಿಕಂಪಿಸಿದಂತಾಯಿತು. ಸದ್ದು ಬರ ಬರುತ್ತ ದೂರವಾಗಿ ಮರಳಿ ಬನದಿರುಳು ಸದ್ದಿಲಯಾಯಿತು.

ನಾನು ಸುಮ್ಮನೆ ಕಲ್ಲಾಗಿ ಕುಳಿತುಬಿಟ್ಟೆ. ದೂರದಿಂದ ಗೂಬೆಯ ಕೀಚುದನಿಯೊಂದು ಶ್ಮಶಾನಪ್ರೇತದ ಕರ್ಕಶವಿಕಟ ಧ್ವನಿಯಂತೆ ಕೇಳಿ ಬಂತು. ಗ್ರಾಮ ಶುನಕ ಕಂಠನಿರ್ಘೋಷಣವು ಕತ್ತಲೆಗೆ ಕಲ್ಲೆಸೆಯುತ್ತಿತ್ತು. ಎಲ್ಲವೂ ಏನೊ ಒಂದು ಭೀಷಣರಹಸ್ಯಸ್ಥವಾಗಿದ್ದಂತೆ ಭಾಸವಾಯಿತು. ನನಗೆ ಬಂದಿದ್ದ ನಿದ್ದೆಯೆಲ್ಲ ಪಲಾಯನವಾಯಿತು. ಸುಮ್ಮನೆ ಶೂನ್ಯಮನಸ್ಕನಾಗಿ ಕುಳಿತೆ. ಆಲೋಚಿಸುವುದಕ್ಕೂ ಕೂಡ ಹೆದರಿಕೆಯಾಯಿತು. ಪಿಶಾಚಿಯನ್ನು ನೆನೆ ನೆನೆದು, ಹೊದಿಕೆಯೊಳಗೆ ಹುದುಗಿ, ಮೈಯಲ್ಲಾಡಿದರೆ ಎಲ್ಲಿ ದೆವ್ವಕ್ಕೆ ತಾನಿರುವುದು ಗೊತ್ತಾಗಿಬಿಡುವುದೋ ಎಂದು ಹೆದರಿ ಸುಮ್ಮನೆ ಬೆವರುತ್ತ ಮಲಗುವ ಮಗುವಿನಂತೆ ಕುಳಿತುಬಿಟ್ಟೆ.

ಕುರುಡು ಕಗ್ಗತ್ತಲೆ. ಭೀಷಣ ನೀರವತೆ. ಸ್ವಲ್ಪ ಹೊತ್ತಾಯಿತು. ಇನ್ನೂ ಸ್ವಲ್ಪ ಹೊತ್ತಾಯಿತು. ಮತ್ತೂ ಸ್ವಲ್ಪ ಹೊತ್ತಾಯಿತು. ಕಾಲದ ನಡಿಗೆಯ ಸಪ್ಪಳವು ಕೇಳಿಸುವಂತಿತ್ತು. ನೋಡು

ತ್ತಿದ್ದಹಾಗೆಯೇ, ಇರುಳು ಕಂಡ ಬೆಳಕಿನ ಕನಸಿನಂತೆ ಮೂಡಣ ಬಾನೆಡೆಯಲ್ಲಿ ಏನೋ ಒಂದಿನಿತು ಹೊಳಪು ಮೈದೋರಿತು. ತಿಂಗಳು ಮೂಡಿಬರುವನೆಂದು ನನ್ನೆದೆಯು ಹಿಗ್ಗಿತು. ಆ ಮೌನತಿಮಿರಗಳ ಗುರುಭಾರದಿಂದ ಕುಗ್ಗಿ ನೆಲಸಮವಾಗಿದ್ದ ಮನಸ್ಸು ನಿಟ್ಟುಸಿರೆಳೆದು ನಸು ತಲೆಯೆತ್ತಿತು. ನೋಡುತ್ತಿದ್ದ ಹಾಗೆಯೇ ಕನಸು ನನೆಕೊನೆಯೇರಿತು. ಕಾಂತಿ ಹೆಚ್ಚಿತು. ಹೊಂಬಣ್ಣವಾಯಿತು. ಬಣ್ಣಕ್ಕೆ ಬಣ್ಣವೇರಿತು. ಪರ್ವತಶಿಖರ ಶಿರೋರೇಖೆಯಲ್ಲಿ ಬೆಳೆದಿದ್ದ ಭೀಮ ಭೂರುಹರಾಜಿಗಳು ಜ್ಯೋತ್ಸ್ನಾಪ್ರದೀಪ್ತವಾದ ನೀಲಾಕಾಶಪಟದಲ್ಲಿ ಚಿತ್ರಿತವಾದಂತೆ ತೋರಿದುವು. ಉತ್ಕಂಠಿತಭಾವದಿಂದ ಅತ್ತಕಡೆ ಉನ್ಮೀಲಿತ ನಯನನಾಗಿ ದೃಷ್ಟಿಸಲಾರಂಭಿಸಿದೆ. ದೃಶ್ಯವು ಅತ್ಯಂತ ರಮಣೀಯವಾಗಿತ್ತು. ಬೇಟೆಗಾರನು ಕಬ್ಬಿಗನಾಗಿ ನೋಡಿದನು. ಮೆಲ್ಲಮೆಲ್ಲನೆ ಕತ್ತಲು ಹಿಂಜರಿಯತೊಡಗಿತು. ನೋಡುತ್ತಿದ್ದ ಹಾಗೆಯೇ ಪೂರ್ವಾಕಾಶವು ಇನ್ನೂ ಪ್ರಕಾಶಮಾನವಾಯಿತು. ಶೀತಲ ಚಂದ್ರಕಿರಣಸ್ನಾತ ಶ್ವೇತೋರ್ಣ ಸದೃಶ ಖಂಡನೀರದಗಳು ನಭೋಮಧ್ಯದಲ್ಲಿ ಮೆರೆದುವು. ಸ್ವಲ್ಪ ಹೊತ್ತಿನಲ್ಲಿಯೇ ಆಕಾಶ ಪಟಸ್ಥ ಸ್ವಲ್ಪ ವಿರಳ ವೃಕ್ಷಮಾಲೆಗಳ ಹಿಂಗಡೆಯಲ್ಲಿ ಸುಂದರ ಶಶಾಂಕನು ಗೋಚರವಾದನು. "ಜೊನ್ನದ ಬಣ್ಣದಿ ತುಂಬಿದ ಬಿಂಬದ ಹೊನ್ನಿನ ಸೊನ್ನೆಯು ಮೂಡಿದುದು." ಹೊಂಗದಿರುಗಳು ಒಯ್ಯೊಯ್ಯನೆ ಅರಣ್ಯಪ್ರವೇಶ ಮಾಡಿದುವು. ಕತ್ತಲು ನಿಬಿಡ ವೃಕ್ಷ ವಾಟಿಕೆಗಳಲ್ಲಿ ಅವಿತುಕೊಂಡಿತು. ಆದರೆ ಮೌನವು ಎಂದಿನಂತೆ ಗಭೀರವಾಗಿತ್ತು. ಚಂದ್ರನು ಆಕಾಶಮಾರ್ಗದಲ್ಲಿಡುವ ಹೆಜ್ಜೆಗಳ ಸದ್ದು ಕೂಡ ಕೇಳಿಸುವಂತಿತ್ತು. ಘೋರ ವಿಷಣ್ಣಳಾಗಿದ್ದ ನಿಶಾ ವನಿತೆಯು ಮಧುರಪ್ರಸನ್ನಳಾದಳು. ರುದ್ರವಾಗಿದ್ದುದೆಲ್ಲ ರಮಣೀಯವಾಯ್ತು. ಚಂದ್ರನು ಮೇಲೇರಿದನು. ಗಿರಿಶಿಖರವನ್ನು ದಾಟಿ ಬಂದನು. ಗಗನದಿಂದೈತರುವ ಜ್ಯೋತ್ಸ್ನಾ ತುಷಾರ ವೃಷ್ಟಿಯು ಹೆಣೆದುಕೊಂಡಿದ್ದ ಶ್ಯಾಮಲ ಪರ್ಣಾರ್ಣವವನ್ನು ಸ್ವರ್ಣವರ್ಣಮಯ ವನ್ನಾಗಿ ಮಾಡಿ, ಸಂದುಗೊಂದುಗಳಲ್ಲಿ ತೂರಿಕೊಂಡು ಬಂದು ಬನದ

ಸಣ್ಣ ಪುಟ್ಟ ಗಿಡ ಬಳ್ಳಿ ಹೊದರುಗಳ ಮೇಲೆ ಮಲಗಿತು. ಬೆಳ್ದಿಂಗಳ ಸೋನೆಯು ಎಡೆಬಿಡದೆ ಸುರಿಯಿತು. ಮರದ ನೆರಳುಗಳು ಮಾತ್ರ ಕತ್ತಲೆಗೆ ಆಶ್ರಯಸ್ಥಾನಗಳಾದುವು. ಅಲ್ಲಿಯೂ ಕೂಡ ಅವಿತು ಕೊಂಡಿದ್ದ ಕತ್ತಲೆಯನ್ನು ಕಂಡುಹಿಡಿಯಬಹುದಾಗಿತ್ತು. ಜಗತ್ತೆಲ್ಲ ಚಿತ್ರೀಭೂತವಾದ ಮಧುರ ಕವನದಂತಿತ್ತು.

ಪ್ರಕೃತ್ಯುಪಾಸಕನಾಗಿದ್ದ ನಾನು ಸೌಂದರ್ಯೋಪಾಸನೆಗೆ ತೊಡ ಗಿದೆ ಬೇಟೆಗಾರನಿಗೆ ಬೇಟೆಯಾಗದಿದ್ದರೂ ಕಬ್ಬಿಗನಿಗೆ ಬೇಟೆಯಾ ಯಿತು ಎಂದುಕೊಂಡೆ. ಕೋವಿಯನ್ನು ತೊಡೆಯಮೇಲೆ ಇಟ್ಟು ಕೊಂಡು ಬಿಡುಗಣ್ಣನಾಗಿ ನೋಡತೊಡಗಿದೆ. ಅವ್ಯಕ್ತದ ಅಂತಃ ಕರಣ ಮೂರ್ತಿಯಾಗಿರುವ ರತಿಯು ತನ್ನ ಅನಂತ ಐಶ್ವರ್ಯವನ್ನು ಮುಕ್ತಹಸ್ತೆಯಾಗಿ ಚೆಲ್ಲಿ ಬೀಸಿದ್ದಳು. ಸೊಬಗು ಸೂರೆಯಾಗಿತ್ತು. ಆದರೆ ಪ್ರೇಕ್ಷಕರಾರು? ಶತಮಾನಗಳಿಂದ ಇದೇ ರೀತಿಯಲ್ಲಿ ಸೊಬಗು ಸೂರೆಯಾಗುತ್ತಿರುವುದು! ಎಷ್ಟು ಜನ ನೋಡಿ ಅನುಭವಿಸಿರುವರು? ಈ ಕಾಡಿನ ಬೆಳ್ದಿಂಗಳು ಎನಿತೆದೆಗಳನ್ನು ವಿಕಾಸಗೊಳಿಸಿರುವುದು? ಈ ವಿಪಿನ ಚಂದ್ರಿಕೆಯು ಯಾರ ಆಹ್ಲಾದಕ್ಕಾಗಿ ಇಂತು ದಿನ ದಿನವೂ ಬೇಸರವಿಲ್ಲದೆ ನಲಿಯುವುದು? ಬಹುಶಃ ನನ್ನ ಆಗಮನವನ್ನೇ ನಿರೀ ಕ್ಷಿಸಿಕೊಂಡಿದ್ದಿರಬಹುದೇ? ಇದರ ತಪಸ್ಸು ಇಂದು ಫಲಿಸಿತೇ? ಇನ್ನು ಮುಂದೆ ಹೀಗಿರುವುದಿಲ್ಲವೇ? ಹೀಗೆಲ್ಲ ಆಲೋಚಿಸಿದೆ. ತರುವಾಯ ಕಾವ್ಯಗಳಲ್ಲಿ ಓದಿದ್ದ ಚಂದ್ರೋದಯಗಳ ವರ್ಣನೆಗಳನ್ನು ನೆನೆದು ವಿಮರ್ಶಿಸಿದೆ. ಮಾತಿನ ಮಂಕುತನವು ಮೇಲೆದ್ದು ತೋರಿತು. ಕಬ್ಬಿಗಳ ಬಡತನವು ಎದೆಯಲ್ಲಿ ಒಂದು ವಿಧವಾದ ನೋವನ್ನುಂಟು ಮಾಡಿತು. ಈ ಚಂದ್ರೋದಯದ, ಈ ವಿಪಿನಗಳ, ಈ ಚಂದ್ರಿಕೆಯ, ಈ ದೃಶ್ಯದ ವರ್ಣನೆ ಮಾಡಲೆಳಸುವವನೇ ಹುಚ್ಚ; ಮಾಡಿದರೂ ಸಂಪೂರ್ಣವಾಗಿ ಬಣ್ಣಿಸಿಬಿಟ್ಟೆನೆಂದುಕೊಳ್ಳುವವನು ಶುದ್ಧಮೂರ್ಖ! ಹೀಗೆಲ್ಲ ಯೋಚಿಸಿದೆ. ತರುವಾಯ ಈ ಮಲೆನಾಡಿನ ಕಾಡುಗಳ ಸಿರಿಯನ್ನು ಅನುಭವಿಸದ ಬಯಲು ಸೀಮೆಯವರ ಎದೆಯ ಬಡತನ ವನ್ನು ನೆನೆದು ಮರುಗಿದೆ. ಹೀಗೆಲ್ಲ ಯೋಚಿಸಿದೆ. ಆಲೋಚನೆಗಳಿಗೆ

ಒಂದು ಕಟ್ಟು, ಒಂದು ಎಲ್ಲೆ, ಒಂದು ನಿಯಮ, ಒಂದೂ ಇರಲಿಲ್ಲ.

ತಂಗಾಳಿಯು ಕುಳಿರ್ಗಾಳಿಯಾಗಲಾರಂಭಿಸಿತು. ಜೊನ್ನದ ಸೋನೆಯೊಂದಿಗೆ ಇಬ್ಬನಿಯ ಸೋನೆಯೂ ಒಯ್ಯೊಯ್ಯನೆ ಇಳಿಯ ತೊಡಗಿತು. ಗಗನದಲ್ಲಿ ತುಂಡು ಮೋಡಗಳು ತುಂಟ ಹುಡುಗರಂತೆ ತಿಂಗಳನ್ನು ಸುಮ್ಮನೆ ಕಾಡುತ್ತಿದ್ದುವು. ಅವುಗಳ ಕಾಟದಿಂದ ಬೆಳ್ದಿಂಗಳು ಒಮ್ಮೆ ಮಬ್ಬಾಗಿ ಒಮ್ಮೆ ಬೆಳಗುತ್ತಿತ್ತು. ಬೆಳಕು ಹೆಚ್ಚು ಕಡಮೆಯಾಗುತ್ತಿದ್ದುದರಿಂದ ನಿಶ್ಚಲವಾದ ಕಲ್ಲು ಗಿಡ ಹೊದರುಗಳು ಹಿಂದಕ್ಕೂ ಮುಂದಕ್ಕೂ ಚಲಿಸಿದಂತಾಗುತ್ತಿತ್ತು. ಆ ಚಲನೆಗೆ ಮನಸ್ಸಿನ ಆವರಣ ವಿಕ್ಷೇಪ ಶಕ್ತಿಗಳು ರೂಪಗಳನ್ನು ಕಲ್ಪಿಸುತ್ತಿದ್ದುವು. ನಾನೂ ಮೋಹಿತನಾಗಿ ಎರಡು ಮೂರು ಸಾರಿ ಯಾವುದೋ ಪ್ರಾಣಿಯೇ ಇರಬೇಕೆಂದು ಭಾವಿಸಿ ಕೋವಿಯನ್ನೆತ್ತಿ ಗುರಿಯಿಟ್ಟೆನು. ಆದರೆ ಮೋಸಹೋಗಲಿಲ್ಲ. ಬೇಗನೆ ಮಾಯೆಯ ಗುಟ್ಟು ಗೊತ್ತಾಗಿ ಹೋಯಿತು. ಆಮೇಲೆ ಕಣ್ಣು ಏನೇನೋ ಮಾಯಾ ರೂಪಗಳನ್ನು ಕಾಣುತ್ತಿತ್ತು. ಆದರೆ ಮನಸ್ಸು ಅವುಗಳನ್ನೆಲ್ಲ ಖಂಡಿಸಿ ಬಿಸುಡುತ್ತಿತ್ತು. ಹೀಗೆಯೇ ಬಹಳ ಹೊತ್ತು ಕಳೆಯಿತು ಕಾದೆ. ಎಲ್ಲ ನೀರವವಾಗಿತ್ತು; ಎಲ್ಲ ರಮಣೀಯವಾಗಿತ್ತು; ಯಾವುದೊಂದು ಜೀವ ಜಂತುವೂ ಸಂಚರಿಸುವ ಚಿಹ್ನೆಯು ತೋರಲಿಲ್ಲ. ಹಾಗೆಯೇ ಕೋವಿಯನ್ನು ತಲೆದಿಂಬು ಮಾಡಿಕೊಂಡು, ಕಂಬಳಿಯನ್ನು ಹೊದೆದುಕೊಂಡು, ಅಂಗಾತನೆ ಮಲಗಿ, ಅನಂತಾಕಾಶದಲ್ಲಿ ಸ್ವರ್ಣ ಜ್ಯೋತಿರ್ಮಯ ಬಿಂಬದಿಂದ ರಂಜಿಸುತ್ತಿದ್ದ ಯಾಮಿನೀಕಾಂತನಿಂದ ಹೊರ ಹೊಮ್ಮಿ ಬನದ ಮೇಲೆ ಎಡೆಬಿಡದೆ ಸುರಿಯುತ್ತಿದ್ದ ಸ್ನಿಗ್ಧೋಜ್ವಲ ಜ್ಯೋತ್ಸ್ನೆಯನ್ನು ಕಣ್ಣಿನಿಂದ ಕುಡಿಯತೊಡಗಿದೆನು. ಕುಡಿದು ಕುಡಿದು ಮೆಲ್ಲನೆ ಕಣ್ಣುಮುಚ್ಚಿ ನಿದ್ದೆ ಹೋದೆನು.

ಎಷ್ಟು ಹೊತ್ತು ನಿದ್ದೆಮಾಡಿದೆನೋ ತಿಳಿಯದು. ಇದ್ದಕ್ಕಿದ್ದ ಹಾಗೆ ನಿದ್ರಾಭಂಗವಾಯಿತು. ಕಾನನದ ನೀರವತೆಯನ್ನು ಆಲೋಡಿಸಿಕೊಂಡು ಈಡಿನ ಢಂಕಾರವೊಂದು ಸುತ್ತಮುತ್ತಲಿದ್ದ ಪರ್ವತ

ಕಂದರಗಳಿಂದ ಪ್ರತಿಧ್ವನಿತವಾಗಿ ಮರಳಿ ಮೌನದಲ್ಲಿ ಮುಳುಗಿ ಹೋಯಿತು. ಅರಣ್ಯಶ್ರೇಣಿಗಳು ಕಂಪಿಸಿದುವು. ನನ್ನ ಅಟ್ಟಣೆಯಿಂದ ಒಂದೇ ನೂರು ದೂರದಲ್ಲಿದ್ದ ಮುತ್ತುಗದ ಮರದೆಲೆಗಳಲ್ಲಿ ಪಟ ಪಟ ಧ್ವನಿಯಾಯಿತು. ಕೋವಿಯಿಂದ ಸಿಡಿದ ದೊಡ್ಡ ಚರೆಗಳು ಮೃತ್ಯು ವೇಗದಿಂದ ಧಾವಿಸಿದುವೆಂದು ಗೊತ್ತಾಯಿತು. ಗಾಬರಿಯಿಂದ ಎದ್ದು ಕುಳಿತೆನು. ಮಂಕು ಹಿಡಿದವನಂತೆ ಸುತ್ತಲೂ ಮಿಳ್ಮಿಳನೆ ನೋಡಿದೆನು. ಅದೇ ಬೆಳ್ದಿಂಗಳು; ಅದೇ ಸದ್ದಿಲ್ಲಿಯಿರುಳು; ಅದೇ ನಿಬಿಡ ಕಾನನ; ಅದೇ ಹೆಮ್ಮರಗಳು; ಅದೇ ಛಾಯೆಗಳು; ಅದೇ ಬಿಳ್ಮುಗಿಲು; ಅದೇ ಇಬ್ಬನಿ ಸೋನೆ. ಢಂಕಾರವು ಮಾತ್ರ ಎಲ್ಲಿಂದಲೋ ಬಂದು ಎಲ್ಲಿಯೋ ಹೋಯಿತು. ಉದ್ವೇಗದಿಂದ ಬೆವರಿದೆನು. ಚರೆಗಳು ಒಂದು ಮಾರು ಈ ಕಡೆ ಬಂದಿದ್ದರೆ ನನ್ನ ಗತಿ ಏನಾಗುತಿತ್ತು ಎಂದು ಚಿಂತಿಸತೊಡಗಿದೆನು. ಎಲ್ಲಿಯಾದರೂ ನನಗೇ ಬಡಿದುವೋ ಏನೋ ಎಂದು ಮೈಮುಟ್ಟಿ ನೋಡಿಕೊಂಡೆ. ಏಕೆಂದರೆ, ಪ್ರಾಣಿಗೆ ಗುಂಡು ಒಡಿದ ಕೂಡಲೇ ಅದರ ಅನುಭವವಾಗುವುದಿಲ್ಲ, ಸ್ವಲ್ಪ ಹೊತ್ತಾದ ಕೂಡಲೇ ಗೊತ್ತಾಗುವುದು; ಎಂಬುದನ್ನು ಹಿರಿಯರಿಂದ ಕೇಳಿ ತಿಳಿದಿದ್ದೆ. ಎಲ್ಲಿಯೂ ನನಗೆ ತಗುಲಿದಂತೆ ತೋರಲಿಲ್ಲ. ಅಂತೂ ಎದೆಯ ಬಡಿತವು ನಿಲ್ಲಲಿಲ್ಲ. ದಿಕ್ಕುಕೆಟ್ಟವನಂತೆ ಕುಳಿತುಬಿಟ್ಟೆ ಯಾವ ಆಲೋಚನೆಯೂ ಮನಸ್ಸಿಗೆ ಹೊಳೆಯಲಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಸಮಾಧಾನ ತಂದುಕೊಂಡು ವಿಚಾರಮಾಡ ಲಾರಂಭಿಸಿದೆ. ಈಡನ್ನು ಹೊಡೆದವನು ಓಬುವಾಗಿರಬೇಕು, ಇಲ್ಲದಿದ್ದರೆ ತಿಮ್ಮು. ಬುದ್ಧಿಯಿಲ್ಲದೆ ನನ್ನ ಕಡೆ ಏಕೆ ಹೊಡೆದರು? ಯಾವ ಪ್ರಾಣಿಗೆ ಹೊಡೆದದ್ದು? ಕಾಡಿನ ಮಧ್ಯೆ ಮರಸಿಗೆ ಕೂತಾಗ ಒಬ್ಬರನ್ನೊಬ್ಬರು ಕರೆಯಬಾರದೆಂದು ಬೇಟೆಯ ಕಟ್ಟು. ಆದರೂ ಕರೆದು ನಿಜವನ್ನು ಕೇಳಿ ತಿಳಿಯಬೇಕೆಂದು ನಿರ್ಧರಿಸಿದೆ. ಇನ್ನೇನು ಕರೆಯಬೇಕು, ಅಷ್ಟರಲ್ಲಿ ಬಳಿಯ ಪೊದೆಯಲ್ಲಿ ಏನೋ ಏಟುಬಿದ್ದ ನೋವಿನಿಂದ ಒದ್ದಾಡಿಕೊಳ್ಳುವಂತೆ ಸದ್ದಾಯಿತು. ಆಲಿಸಿದೆ. ಹೌದು! ಗುಂಡಿನೇಟು ಬಿದ್ದ ಜೀವಿಯೇ ಇರಬೇಕು ಎಂದು ಗೊತ್ತುಮಾಡಿ

ಕರೆಯುವುದು ತರವಲ್ಲ ಎಂದುಕೊಂಡೆ. ಏಕೆಂದರೆ, ಗಾಯವಾದ ಜೀವಿಯು ಹುಲಿ ಚಿರತೆಗಳಲ್ಲಿ ಯಾವುದಾದರೂ ಆಗಿದ್ದರೆ ನಾನು ಕುಳಿತ ಸ್ಥಳವು ಗೊತ್ತಾಗಿ ಮೇಲೆ ನೆಗೆಯಬಹುದು. ಹೀಗೆಂದು ಸುಮ್ಮನಾದೆ. ಸ್ವಲ್ಪ ಕಾಲವಾದ ತರುವಾಯ ಸದ್ದು ನಿಂತಿತು. ಪ್ರಾಣಿಯು ಸತ್ತುಹೋಯಿತೆಂದು ಊಹಿಸಿದೆ. ಆದರೂ ಕರೆಯಲು ಧೈರ್ಯವಾಗಲಿಲ್ಲ. ಅಷ್ಟರಲ್ಲಿಯೇ ಪ್ರಭಾತ ಸೂಚಕವಾದ ಪುಣ್ಯ ಸಮೀರನು ತಣ್ಣನೆ ತೀಡುತ್ತಿದ್ದುದರಿಂದಲೂ, ಚಂದ್ರನು ಪಶ್ಚಿಮ ದಿಗಂತಾಭಿಮುಖನಾಗಿದ್ದುದರಿಂದಲೂ ಬೇಗ ಬೆಳಗಾಗುವುದೆಂದು ಬಗೆದು ಸುಮ್ಮನಾದೆ. ಒರಒರುತ್ತಾ ಇಬ್ಬನಿಯ ಸೋನೆಯು ಪ್ರಬಲವಾಯಿತು. ಬೆಳ್ದಿಂಗಳು ನಸು ಮಬ್ಬಾಯಿತು. ಚಂದ್ರನೂ ಬಂದಿಸಿತು ಕಾಂತಿಹೀನನಾದನು. ಮರದೆಲೆಗಳಿಂದ ಹನಿಗಳು ತಟ್ ಪಟ್ ಎಂದು ವಿಷಣ್ಣಾರವದಿಂದ ಬೀಳತೊಡಗಿದುವು. ನಕ್ಷತ್ರಗಳು ಮುಸುಕಿ ಬರುತ್ತಿದ್ದ ಬೆಳ್ಮಂಜಿನಲ್ಲಿ ಮುಚ್ಚಿಹೋದುವು. ಮುಗಿಲಿ ನಿಂದ ಜೊಸ್ಸ್ರದ ಸೋನೆಯೊಂದಿಗೆ ಹಿಟ್ಟಿನ ಸೋನೆಯೂ ಇಳಿದಂತಾ ಯಿತು. ದೂರ ಕಣಿವೆಯಲ್ಲಿ ಊರು ಕೋಳಿಗಳ ಕೂಗು ಕೇಳಿಸಿತು. ಜಗತ್ತಿನ ಉನ್ನಿದ್ರಾವಸ್ಥೆಯ ಸೂಚನೆಯು ತೋರಿಬಂದಿತು. ಕಂಬಳಿ ಯನ್ನು ಬಲವಾಗಿ ಸುತ್ತಿಕೊಂಡು ಕೈಯಲ್ಲಿ ಕೋವಿ ಹಿಡಿದುಕೊಂಡು ಕುಳಿತೆ.

ಸ್ವಲ್ಪ ಹೊತ್ತಿನಲ್ಲಿಯೇ ಕಾಡು ಕುರಿಯೊಂದು ಗಟ್ಟಿಯಾಗಿ ಅರ ಚುತ್ತಾ, ಮೌನವನ್ನು ಪಂಢಿಸುತ್ತಾ ನನ್ನ ಹಣ್ಣಿನ ಮರದ ಕಡೆಗೆ ಬರುವಂತೆ ಭಾಸವಾಯಿತು. ಕೂಗುತ್ತಾ ಕೂಗುತ್ತಾ ಬಳಿ ಸಾರಿತು. ಆದರೆ ನನ್ನೆಡೆಗೆ ಬರಲಿಲ್ಲ. ಹಾಗೆಯೇ ಅರಣ್ಯಶೃಂಗಾಭಿಮುಖ ವಾಗಿ ತಿರುಗಿಹೋಯಿತು. ಅಷ್ಟರಲ್ಲಿ ಕಾಡಿನ ನಟ್ಟನಡುವೆ ಸಿಂಗಳೀಕ ವೊಂದು ವಿಕಟಧ್ವನಿ ಮಾಡತೊಡಗಿತು. ಅದು ಅಪರಿಚಿತ ನಾದ ವಾದ್ದರಿಂದ ಇಂತಹ ಪ್ರಾಣಿಯ ದನಿಯೆಂದು ಆಗ ನನಗೆ ಗೊತ್ತಾಗ ಲಿಲ್ಲ. ತರುವಾಯ ತಿಳಿದುಕೊಂಡೆ. ಕೂತಿದ್ದಹಾಗೆಯೇ ಮಡಿವಾಳ ಪಕ್ಷಿಯೊಂದು ಉಷಃಕಾಲವನ್ನು ಕರೆಯುವಂತೆ ಹಾಡತೊಡಗಿತು.

ಅದರ ಇನಿದನಿಯು ನಾನಾ ವಿಧವಾಗಿ ನಲಿ ನಲಿದು ಬಂದು, ಒಂದು ತಡವೆ ಬನಗಳನ್ನು ಮುಟ್ಟಿತು; ಒಂದು ತಡವೆ ಕಣಿವೆಗಳನ್ನು ಸೇರಿತು; ಒಂದು ತಡವೆ ಗಗನಕ್ಕೇರಿತು ; ಒಂದು ತಡವೆ ಪೃಥ್ವಿಯನ್ನೆಲ್ಲ ಮುದದಿಂದ ತಬ್ಬಿತು. ತುಸು ಹೊತ್ತಿನಲ್ಲಿಯೇ ಕಾಜಾಣ ಪಕ್ಷಿಯೊಂದು ರಾಗಾಲಾಪನೆ ಪ್ರಾರಂಭಿಸಿತು. ಎಂತಹ ಭುವನಮೋಹನ ಗಾನ! ಕಾಜಾಣ ಪಕ್ಷಿಯ ಗಾನದೆದುರು ಮತ್ತಾವ ಹಕ್ಕಿಯ ಗಾನವೂ ನಿಲ್ಲಲಾರದು. ಅದರೆದುರು ಕೋಗಿಲೆಯ ಪಂಚಮ ಸ್ವರವೂ ಕೂಡ ಪಂಚಮ ಸ್ವರವೇ! ಅದರ ಗಾನದ ಆಲಿಂಗನದಲ್ಲಿ ಉಷೆಯು ಮೈಮರೆಯುವಳು. ವನ ಗಾಯಕರಲ್ಲಿ ಕಾಜಾಣಕ್ಕೇ ಪ್ರಥಮ ಸ್ಥಾನವು ಸಲ್ಲತಕ್ಕದ್ದು!

ಮೆಲ್ಲಮೆಲ್ಲನೆ ಬೆಳಕು ಹರಿಯಿತು. ಇಬ್ಬನಿಯ ಸೋನೆಯು ಬರಬರುತ್ತ ಕಡಿಮೆಯಾಯಿತು. ಬಾನಿನಿಂದ ಸುರಿದ ಕವಣವು ಪರ್ವತ ಪ್ರಾಂತಗಳಿಂದ ಹರಿದು ಕಣಿವೆಗಳಲ್ಲಿ ನಿಂತಿತು. ಚಂದ್ರನು ಅಪ್ರಫುಲ್ಲನಾದನು. ಉದಯ ದಿಗ್ಭಾಗದಲ್ಲಿ ಅರುಣನ ಹೊಂಬೆಳಕು ಪಸರಿಸಿತು. ತಂಗಾಳಿಯು ತಣ್ಣಗೆ ತೀಡಿತು. ಹೂವಿನ ಮರಗಳಲ್ಲಿ ಕೋಟ್ಯನುಕೋಟಿ ತುಂಬಿಗಳು, ಜೇನು ಹುಳುಗಳು, ಹೂವಿನ ಹಕ್ಕಿಗಳು ಎಲ್ಲ ಸೇರಿ ಅನಾಹತ ಧ್ವನಿಮಾಡತೊಡಗಿದುವು. ಇತರ ಹಕ್ಕಿಗಳೂ ಅಲ್ಲಲ್ಲಿ ಇಂಚರಗೈದುವು. ಇರುಳಿನ ಮಾಯೆಯೆಲ್ಲ ಬಟ್ಟಬಯಲಾಯಿತು. ರಾತ್ರಿಯ ವಿಕಾರಾಕೃತಿಗಳೆಲ್ಲ ಗಿಡ ಮರ ಹೊದರುಗಳ ವೇಷವನ್ನು ಧರಿಸಿ ನಿಂತುವು.

ನಾನು ಓಬುವನ್ನು ಕರೆದೆ. ಅವನು "ಓ" ಎಂದನು. ಮೂವರೂ ಅಟ್ಟಣೆಗಳಿಂದ ಕೋವಿ ಕಂಬಳಿಗಳೊಡನೆ ಕೆಳಗಿಳಿದೆವು. ಎಲ್ಲರೂ ಮಾವಿನ ಮರದ ಬುಡವನ್ನು ಸೇರಿದೆವು. ನಾನು

"ಯಾರು ಈಡು ಹೊಡೆದಿದ್ದು?" ಎಂದೆನು.

"ನಾನು" ಎಂದನು ಓಬು.

"ಯಾವುದಕ್ಕೆ ಹೊಡೆದಿದ್ದು?" ಎಂದನು ತಿಮ್ಮ.

ಓಬು ಕತೆ ಹೇಳಿದನು: "ಬಹುಶಃ ಕಣೆಹಂದಿ ಎಂದು ಕಾಣುತ್ತದೆ."

"ಬಹುಶಃ! ಕಾಣುತ್ತದೆ!—ಇದೆಂತಹ ಮಾತು. ಸರಿಯಾಗಿ ನೋಡಿ ಹೊಡೆದೆಯೋ ಇಲ್ಲವೊ?" ಎಂದೆನು.

"ನಾನೇನೋ ಸರಿಯಾಗಿ ಗುರಿಯಿಟ್ಟು ಹೊಡೆದೆ. ನೋಡು, ಇಲ್ಲಿತ್ತು ಅದು. ಬಹಳ ಹೊತ್ತಿನಿಂದ ಕಟ್ ಕಟ್ ಎಂದು ಹಣ್ಣನ್ನು ಪುಡಿ ಮಾಡುತ್ತಿತ್ತು. ನನಗೆ ಪೂರ, ನಿನಗೆ ಬಹಳ ಸವಿಪಾಪ ನೀನು ಹೊಡೆಯುತ್ತೀಯಾ ಎಂದು ನೋಡಿದೆ. ಅದೇಕೆ? ನೀನು ಹೊಡೆಯ ಬಾರದಾಗಿತ್ತೆ?" ಎಂದನು ಓಬು.

ನಾನು ಮಲಗಿದ್ದ ಸಂಗತಿ ಹೇಳಿದರೆ ಕೆಲಸ ಕೆಡುವುದೆಂದು ತಿಳಿದು, "ಏನೋ! ನನಗೇನೂ ಕಾಣಿಸಲಿಲ್ಲ. ಕಾಣಿಸಿದ್ದರೆ ಹೊಡೆ ಯದೆ ಬಿಡುತ್ತಿದ್ದೆನೇ?" ಎಂದೆನು.

ತಿಮ್ಮ "ಎಲ್ಲಿಯಾದರೂ ಮಲಗಿದ್ದೆಯೋ ಏನು?" ಎಂದನು.

"ಹಾಗೆ ರಾತ್ರಿಯೆಲ್ಲ ಎಚ್ಚರವಾಗಿರುವುದಕ್ಕೆ ಆದೀತೆ? ಸ್ವಲ್ಪ ಮಲಗಿದ್ದೆ" ಎಂದೆನು.

"ಅದಕ್ಕೇ ನಾನು ಹೇಳಿದ್ದು ನಿನ್ನೆ! ಅಟ್ಟಣೆ ಚೆನ್ನಾಗಿ ಕಟ್ಟಿದರೆ ಯಾರಿಗಾದರೂ ಹಾಗೆಯೇ, ಮಲಗುವಂತಾಗುತ್ತೆ!" ಎಂದನು ತಿಮ್ಮ.

ಓಬುವು ಹೊಡೆದ ಸ್ಥಳವನ್ನು ತೋರಿಸಿದನು. ಚೆನ್ನಾಗಿ ಪರೀಕ್ಷೆ ಮಾಡಿದೆವು. ಈಡೇನೊ ಅಲ್ಲಿಗೆ ಬಿದ್ದಿತ್ತು: ಚರೆ ಬಡಿದ ಗುರುತು ಕಾಣುತ್ತಿತ್ತು. ಚರೆ ನೆಲಕ್ಕೆ ಒಡೆದು ಚಿಗಿದು ನಾನು ಕೂತಿದ್ದ ಮರದ ಬಳಿಯಲ್ಲಿ ಹಾದುಹೋಗಿದ್ದುವು. ಆದರೆ ಪ್ರಾಣಿಗೆ ಏಟು ಬಿದ್ದ ಕುರುಹು ಯಾವುದೂ ತೋರಲಿಲ್ಲ. ಮುಳ್ಳುಹಂದಿಗೆ ಗುಂಡುಬಿದ್ದರೆ ಸಾಮಾನ್ಯವಾಗಿ ಕಣೆಗಳಾದರೂ ಉದುರಿ ಅಲ್ಲಿ ಬೀಳ ಬೇಕು; ಅಥವಾ ರಕ್ತ ಬೀಳಬೇಕು, ಯಾವುದೂ ಕಾಣಲಿಲ್ಲ.

"ಸರಿಯಾಗಿ ಪ್ರಾಣಿ ಎಂದು ಗೊತ್ತುಮಾಡಿಕೊಂಡು ಹೊಡೆದೆಯೊ? ಅಥವಾ ಬೆಳ್ದಿಂಗಳಲ್ಲಿ ಗಿಡ ಪೊದೆಗಳು ಚಲಿಸಿದಂತಾಗಲು ಹಂದಿ ಎಂದು ಭ್ರಮಿಸಿ ಹೊಡೆದೆಯೋ?" ಎಂದೆನು.

ಓಬುವು ಸ್ವಲ್ಪ ರೇಗಿಬಿದ್ದು, 'ನಾನೇನು ಇವತ್ತು ಬೇಟೆಗೆ ಬಂದವನೇ? ಚೆನ್ನಾಗಿ ನೋಡಿ ಹಂದಿ ಎಂದು ಗೊತ್ತುಮಾಡಿಕೊಂಡೇ ಹೊಡೆದಿದ್ದೇನೆ. ಗುರಿ ಕೂಡ ಸರಿಯಾಗಿ ಬಿದ್ದಿದೆ" ಎಂದನು.

"ಈಡು ಹಾರಿದ ಸ್ವಲ್ಪ ಹೊತ್ತಿನ ಮೇಲೆ ಏನೋ ಬಿದ್ದು ಒದ್ದಾಡಿದಂತಾಯಿತು. ಇಲ್ಲಿ ಸುತ್ತ ಹುಡುಕಿ ನೋಡೋಣ" ಎಂದನು ತಿಮ್ಮು.

ಹಾಗೆಯೇ ಆಗಲಿ ಎಂದು ಎಲ್ಲರೂ ಜಾಡು ಹಿಡಿಯತೊಡಗಿದೆವು. ಎಲ್ಲಿಯೂ ಯಾವ ಚಿಹ್ನೆಯೂ ಕಾಣಲಿಲ್ಲ. ಗುರಿ ತಪ್ಪಿತೆಂದು ನಿರ್ಣಯಿಸಿ, ರಾತ್ರಿಯ ಅನುಭವಗಳನ್ನು ಕುರಿತು ಗಟ್ಟಿಯಾಗಿ ಹರಟುತ್ತ ಕಾಡಿನಿಂದ ಮನೆಯ ಕಡೆಗೆ ಹೊರಟೆವು. ಮುಂದೆ ಹೋಗುತ್ತಿದ್ದ ತಿಮ್ಮು ಇದ್ದಕ್ಕಿದ್ದಂತೆ ನಿಂತು ನೆಲದ ಕಡೆ ನೋಡಿದನು. "ರಕ್ತ!" ಎಂದನು. ಎಲ್ಲರೂ ಬಗ್ಗಿ ನೋಡಿದೆವು. ಹೌದು! ರಕ್ತದ ಹನಿಗಳು ಒಣಗೆಲೆಗಳ ಮೇಲೆ ಬಿದ್ದಿದ್ದುವು. ಓಬುಗೆ ಬಹಳ ಸಂತೋಷವಾಯಿತು. "ನೋಡಿ, ಗುರಿ ತಪ್ಪಿತೆಂದು ಸುಮ್ಮನೆ ನನ್ನ ಮೇಲೆ ತಪ್ಪುಹೊರಿಸಿದ್ದಿರಲ್ಲಾ!" ಎಂದನು. ನೆತ್ತರು ಬಿದ್ದ ಜಾಡನ್ನೇ ನೋಡುತ್ತ ಮುಂದರಿದೆವು. ಮುಂದೆ ಮುಂದೆ ಹೋದಂತೆಲ್ಲ ನೆತ್ತರು ಮುದ್ದೆ ಮುದ್ದೆಯಾಗಿ ಬಿದ್ದಿತ್ತು. ಪ್ರಾಣಿ ಅಲ್ಲೇ ಎಲ್ಲಿಯೋ ಸತ್ತುಬಿದ್ದಿರಬೇಕೆಂದು ಧಾವಿಸಿದೆವು. ಸುಮಾರು ಒಂದೂವರೆ ಫರ್ಲಾಂಗಿನವರೆಗೆ ರಕ್ತದ ಜಾಡು ಸಿಕ್ಕಿತು. ಆಮೇಲೆ ರಕ್ತವೂ ಸಿಕ್ಕಲಿಲ್ಲ; ಪ್ರಾಣಿಯೂ ಸಿಕ್ಕಲಿಲ್ಲ. ಹುಡುಕಿ ಹುಡುಕಿ ಬೇಸತ್ತು ಮನೆಯ ಕಡೆಗೆ ತಿರುಗಿದೆವು. ದಾರಿಯಲ್ಲಿ ಎಲ್ಲರೂ ಉಪನ್ಯಾಸ ಮಾಡತೊಡಗಿದೆವು ನನ್ನ ಸೀನು, ಕೆಮ್ಮುಗಳಿಗೆ ತಕ್ಕ ಸನ್ಮಾನವೂ ಆಯಿತು. ಅಂತೂ ಮೊಲೆಯ ಹಾಲನ್ನು ನೆನೆದು ಕೊಟ್ಟಿಗೆಗೆ ಹಾರಿ

ಹೋಗುವ ಎಳಗರುಗಳಂತೆ ಕಾಫಿ ತಿಂಡಿಗಳನ್ನು ನೆನೆದು ಮನೆಯ ಕಡೆಗೆ ಭರದಿಂದ ಸಾಗಿದೆವು. ಅರುಣೋದಯದ ಹೇಮಜ್ಯೋತಿಯು ಪೂರ್ವ ದಿಗ್ಭಾಗದಲ್ಲಿ ಪ್ರಜ್ವಲಿಸುತ್ತಿತ್ತು.

ದಟ್ಟವಾದ ಕಾಡನ್ನು ಹಿಂದಿಕ್ಕಿ ವನದಂಚಿಗೆ ಬಂದೆವು. ಆದರೆ ನಡೆಯಲು ಇನ್ನೂ ಪರ್ವತದ ಅರ್ಧ ಭಾಗವು ಉಳಿದಿತ್ತು. ಅಲ್ಲೊಂದು ಬಂಡೆಗಳಿಂದ ಬಯಲಾದ ಪ್ರದೇಶವಿತ್ತು. ಅಲ್ಲಿ ನಿಂತು ನೋಡಿದೆವು, ಎಂದೂ ಮರೆಯಲಾಗದ ಸ್ವರ್ಗೀಯ ಸುಂದರ ದೃಶ್ಯವನ್ನು! ಅದನ್ನು ವರ್ಣಿಸಲು ತೊಡಗಿದರೆ ಪಾಪಮಾಡಿದಂತಾಗುತ್ತದೆ! ಆದರೂ ಚಿಂತೆಯಿಲ್ಲ. ಪ್ರಯತ್ನಪಡುವುದರಲ್ಲಿ ಪಾಪವಿಲ್ಲ. ನಾವು ನಿಂತ ಸ್ಥಳವು ಎತ್ತರವಾಗಿತ್ತು. ಸುಮಾರು ಮೂವತ್ತು ಮೈಲಿಗಳ ದೃಶ್ಯವು ನಮ್ಮೆದುರಿತ್ತು. ದಿಗಂತ ವಿಶ್ರಾಂತವಾದ ಸಹ್ಯಾದ್ರಿ ಪರ್ವತಶ್ರೇಣಿಗಳು ತರಂಗ ತರಂಗಗಳಾಗಿ ಸ್ಪರ್ಧೆಯಿಂದ ಹಬ್ಬಿದ್ದುವು. ದೂರ ಸರಿದಂತೆಲ್ಲ ಅಸ್ಫುಟವಾಗಿ ತೋರುತ್ತಿದ್ದುವು ಕಣಿವೆಗಳಲ್ಲಿ ಇಬ್ಬನಿಯ ಬಲ್ಗಡಲು ತುಂಬಿತ್ತು. ವೀಚಿವಿಕ್ಷೋಭಿತ ಶ್ವೇತಫೇನಾವೃತ ಮಹಾವಾರಿಧಿಯಂತೆ ಪಸರಿಸಿದ್ದ ತುಷಾರಸಮುದ್ರದಲ್ಲಿ ಶ್ಯಾಮಲ ಗಿರಿಶೃಂಗಗಳು ದ್ವೀಪಗಳಂತೆ ತಲೆಯೆತ್ತಿಕೊಂಡಿದ್ದುವು. ಕಂದರ ಪ್ರಾಂತಗಳಲ್ಲಿದ್ದ ಗದ್ದೆ, ತೋಟ, ಹಳ್ಳಿ, ಕಾಡು ಎಲ್ಲವೂ ಹೆಸರಿಲ್ಲದಂತೆ ಅಳಿದುಹೋಗಿದ್ದುವು. ದೃಷ್ಟಿ ಸೀಮೆಯನ್ನೆಲ್ಲ ಆವರಿಸಿದ್ದ ತುಷಾರ ಜಲನಿಧಿಯಲ್ಲಿ ಹಡಗುಗಳು ಕುಳಿತು ಸಂಚರಿಸಬಹುದಾಗಿತ್ತು! ನಾವು ಮೂವರೂ ಅವಾಕ್ಕಾಗಿ ನಿಂತು ನೋಡಿದೆವು. ಇಬ್ಬನಿಯ ಕಡಲಿನಿಂದ ತಲೆಯೆತ್ತಿ ನಿಂತಿದ್ದ ಗಿರಿಶೃಂಗಗಳು ಮುಂಬೆಳಕಿನ ಹೊಂಬಣ್ಣವನ್ನು ಹೊದೆದಿದ್ದುವು. ಬಾಲಸೂರ್ಯನ ಸ್ನಿಗ್ಧ ಕೋಮಲ ಸುವರ್ಣ ಜ್ಯೋತಿಯಿಂದ ವೃಕ್ಷರಾಜಿಗಳ ಶ್ಯಾಮಲ ಪರ್ಣವಿತಾನಗಳಲ್ಲಿ ಖಚಿತವಾಗಿದ್ದ ಸಹಸ್ರ ಸಹಸ್ರ ಹಿಮಮಣಿಗಳು ಅನರ್ಘ್ಯ ರತ್ನ ಸಮೂಹಗಳಂತೆ ವಿರಾಜಿಸುತ್ತಿದ್ದುವು. ಬೆಳ್ನೊರೆಯಂತೆ ಹಬ್ಬಿದ್ದ ಇಬ್ಬನಿಯ ಕಡಲಿನಲ್ಲಿ ಮುಳುಗಿಹೋಗಿದ್ದ ಕಣಿವೆಯ ಕಾಡುಗಳಿಂದ ಕೇಳಿ ಬರುತ್ತಿದ್ದ ವಿವಿಧ ವಿಹಂಗಮಗಳ ಮಧುರವಾಣಿಯು ಅದೃಶ್ಯರಾಗಿ ಉಲಿ

ಯುವ ಗಂಧರ್ವ ಕಿನ್ನರರ ಗಾಯನದಂತೆ ಮನೋಹರವಾಗಿತ್ತು. ನಾವು ಮೂವರೂ ಅವಾಕ್ಕಾಗಿ ನಿಂತು ನೋಡಿದೆವು! ನೋಡಿದೆವು! ಸುಮ್ಮನೆ ಭಕ್ತಿಯಿಂದ ಭಾವಾವಿಷ್ಟರಾಗಿ ನೋಡಿದೆವು!

ಬೇಟೆಗಾರರಾಗಿ ಬನಕೆ ಹೋದವರು ಕಬ್ಬಿಗರಾಗಿ ಮನೆಗೆ ಬಂದೆವು.



# ಅಜ್ಜಯ್ಯನ ಅಭ್ಯಂಜನ

ಮಲೆನಾಡಿನ ಜೀವನವನ್ನು ಸಾಮಾನ್ಯವಾಗಿ ನಿರುದ್ವಿಗ್ನ ಎಂದು ಕರೆಯಬಹುದು. ನಗರಗಳಲ್ಲಿರುವಂತೆ ದ್ರುತಪದ ಸಂಚಾರವಿಲ್ಲ; ಮೋಟಾರು ಮೊದಲಾದ ಆತುರದ ಯಾನಗಳ ಗಡಿಬಿಡಿಯಿಲ್ಲ; ಸಿನಿಮಾ ನಾಟಕಶಾಲೆಗಳ ಉದ್ವೇಗವಿಲ್ಲ; ಚಿತ್ರವಿಚಿತ್ರವಾದ ವರ್ತಮಾನ ಸಂಕುಲದಿಂದ ಸಮಾಚ್ಛನ್ನವಾಗಿ ಶಾಂತಿಭಂಗಕಾರಿಗಳಾಗಿರುವ ಚಿತ್ರಗುಪ್ತನ ದಪ್ತರದಂತಿರುವ ಪತ್ರಿಕೆಗಳ ಗಲಭೆಯಂತೂ ಬಹಳಮಟ್ಟಿಗೆ ಸೊನ್ನೆ. ಸಾಯಂಕಾಲದಲ್ಲಿ ದಿವದ ಬೇಸರವನ್ನು ಪರಿಹರಿಸಿಕೊಳ್ಳಲೆಂದು ಉಪನ್ಯಾಸಮಂದಿರಗಳಿಗೆ ಹೋಗಿ ನೀರಸವಾದ ಭಾಷಣಗಳನ್ನು ಕೇಳಿ ಬೇಜಾರಿಗೆ ಬದಲಾಗಿ ಅಶಾಂತಿಯನ್ನು ತುಂಬಿಕೊಂಡು ಗೊಣಗುತ್ತಾ ಹಿಂತಿರುಗುವ ಪ್ರಸಂಗಗಳಂತೂ ಒದಗುವುದೇ ಇಲ್ಲ. ಅಲ್ಲಿರುವುದು ಕೇವಲ ಶಾಂತಿ; ವನ್ಯವಾದರೂ ಅನಾಗರಿಕವಲ್ಲದ ಶಾಂತಿ. ಸುತ್ತ ನೋಡಿದರೆ ಮಾಲೆಮಾಲೆಯಾದ ಮಲೆಗಳು, ದಟ್ಟವಾದ ಕಾಡುಗಳು; ಅಲ್ಲಿ ಮೌನವನ್ನೇ ಮಲಗಿಸುವ ಜೋಗುಳದಂತಿರುವ ಹಕ್ಕಿಗಳ ಸವಿದನಿ. ಮೇಲೆ ತಲೆಯೆತ್ತಿ ನೋಡಿದರೆ ಆಕಾಶ, ನೀಲಾಕಾಶ; ಅನಂತ, ಅಪಾರ, ಪ್ರಶಾಂತ. ಅಲ್ಲಿ ಸುತ್ತುವ ಬೆಳ್ಮುಗಿಲಿನ ತುಂಡುಗಳೂ ಕೂಡ ಮೆಲ್ಲಗೆ ಚಲಿಸುತ್ತಾ ಜಗತ್ತನ್ನು ಸ್ವಪ್ನದಿಂದ ಹೊದಿಸುವಂತೆ ತೋರುವುವು. ದಾರಿಯಲ್ಲಿ ತೊರೆಗಳೇನೋ ಬಂಡೆಯಿಂದ ಇಳಿದು ಜಾರಿ ಹರಿಯುತ್ತಿರುವುವು. ಆದರೆ ಆ ಹರಿದಾಟದಲ್ಲಿ ತತ್ತ್ವಜ್ಞನ ಔದಾಸೀನ್ಯವಿರುವುದು; ಯೋಗಿಯ ನಿಷ್ಕಾಮಕರ್ಮವಿರುವುದು. ಜನಗಳ ನಿತ್ಯಜೀವನದಲ್ಲಿ ಹಲಕೆಲವು ಕ್ಷುದ್ರ ಕ್ಷುದ್ರ ಉದ್ವೇಗಗಳಿರಬಹುದು. ಬಡಸಂಸಾರದ ಸಾಲದ ಶೂಲೆ; ಮನೆಯಲ್ಲಿ ಮಗುವಿಗೆ ಜ್ವರ; ಒಂದು ಎತ್ತನ್ನು ಹುಲಿ ಹಿಡಿದುದರಿಂದ ಈ ಸಾರಿ ಉಳಲು ಒಂದು ಎತ್ತು ಸಾಲದು; ಮಳೆಗಾಲಕ್ಕೆ ಬೇಕಾದ ಕಟ್ಟಿಗೆ

ಇನ್ನೂ ಮನೆಗೆ ಬಂದಿಲ್ಲ; ಕೋರ್ಟಿನಲ್ಲಿ ಕೇಸು; ದನಕರುಗಳಿಗೆ ಜಕ್ಕಿಣಿಯ ಕಾಟ—ಇತ್ಯಾದಿ.

ಇಂತಹ ಶಾಂತಿಪ್ರಪಂಚದಲ್ಲಿಯೂ ಕ್ರಾಂತಿಕಾಲಗಳಿವೆ. ಜನನ ಸಮಯದಲ್ಲಿ, ಮರಣ ಸಮಯದಲ್ಲಿ, ವಿವಾಹ ಕಾಲದಲ್ಲಿ, ಬೇಟೆಯಲ್ಲಿ ಮನೆಯ ಜನಗಳೆಲ್ಲ ತುಂಬ ಚಟುವಟಿಕೆಯಿಂದಿರುತ್ತಾರೆ. ಪೋಲಿಸರ ಕಾಟ, ಜಮಾಬಂದಿಯ ಊಟ ಇವುಗಳನ್ನು ಉತ್ಕ್ರಾಂತಿಗಳ ಗುಂಪಿಗೆ ಸೇರಿಸಬಹುದು. ಇವುಗಳ ವಿಚಾರವಾಗಿ ಮುಂದೆ ಹೇಳುತ್ತೇನೆ. ಮೇಲೆ ಹೇಳಿದ ವಿಷಯಗಳನ್ನು ಬಿಟ್ಟರೆ ಇನ್ನೊಂದು ಕ್ರಾಂತಿವಿಷಯವಿದೆ. ಅದು ಯಾವುದೆಂದು ಊಹಿಸಬಲ್ಲಿರೇನು? ಇಲ್ಲ; ನಿಮ್ಮಿಂದಾಗುವುದಿಲ್ಲ. ನೀವು ಬಯಲು ಸೀಮೆಯವರು. ಐದೇ ನಿಮಿಷದಲ್ಲಿ ಸ್ನಾನಮಾಡಿ ಎರಡೇ ನಿಮಿಷದಲ್ಲಿ ಊಟಮಾಡುವ ಜಾತಿಗೆ ಸೇರಿದವರು! ಹೋಗಲಿ ನೀವು ಊಹಿಸಲಾಗದಿದ್ದರೆ ನಾನೇ ಹೇಳಿಬಿಡುತ್ತೇನೆ—ಅಭ್ಯಂಜನ! ಬೆರಗಾಗಬೇಡಿ. ನಿಮಗೆ ಗೊತ್ತಿಲ್ಲ. ಮಲೆನಾಡಿನಲ್ಲಿ ಅಭ್ಯಂಜನನೆಂದರೆ ಮಹಾ ಕಾರ್ಯ. ಅಭ್ಯಂಜನದ ದಿನ ಯಾರು ಸಾಯುತ್ತಾರೆ? ಯಾರು ಉಳಿಯುತ್ತಾರೆ? ಯಾರು ಮೂರ್ಛೆ ಬೀಳುತ್ತಾರೆ? ಹೇಳುವುದೇ ಕಷ್ಟ. ಆ ದಿನ ಮನೆಯಲ್ಲಿ ಗಲಭೆಯೋ ಗಲಭೆ!

ನಾನು ಚಿಕ್ಕವನಾಗಿದ್ದಾಗ–ಏಕೆಂದರೆ ಈಗ ನಾಗರಿಕತೆ ಬಂದುದರಿಂದ ಹಿಂದಿನ ಆಚಾರಗಳೆಲ್ಲ ಪರಿವರ್ತನೆಯಾಗಿ ಹೋಗಿವೆ—ನಾನು ಚಿಕ್ಕವನಾಗಿದ್ದಾಗ ನಮ್ಮ ಮನೆಯಲ್ಲಿ 'ಅಭ್ಯಂಗ' ಎಂದರೆ ನಮಗೆಲ್ಲ ಜನನ, ಮರಣ, ವಿವಾಹ, ಪೋಲಿಸರ ಕಾಟ, ಜಮಾಬಂದಿ ಎಲ್ಲವೂ ಒಟ್ಟಿಗೆ ಬಂದಹಾಗೆ ಅನುಭವವಾಗುತ್ತಿತ್ತು. ನಾವಾಗ ವಿದ್ಯಾರ್ಥಿಗಳಷ್ಟೆ? ಐಗಳು ನಮ್ಮ ಮನೆಯಲ್ಲಿಯೇ ಕೂಲಿ ಕೆಲಸ ಮಾಡುತ್ತಿದ್ದರು. ನಮಗೆ ಅವರು ಮೇಷ್ಟರಾದರೂ ನಮ್ಮ ಹಿರಿಯರಿಗೆ ಅವರು ಕೂಲಿಯಾಳು. ಐಗಳು ನಮಗೆ ಅ ಆ ಇ ಈ ಹೇಳಿಕೊಡುವುದರ ಜೊತೆಗೆ ಎಣ್ಣೆ ಹಚ್ಚುವುದು, ಸ್ನಾನಮಾಡಿಸುವುದು; ಸಮಯಬಿದ್ದರೆ ಬೆಟ್ಟಿ ಒಗೆದುಕೊಡುವುದು, ಪ್ರಸಂಗ ಒದಗಿದರೆ ಗುಡಿಸುವುದು,

ಸನ್ನಿವೇಶ ಪ್ರಾಪ್ತವಾದರೆ ಯಜಮಾನರ ಕೂಸನ್ನು ಆಡಿಸುವುದು; ಅವರ ವೃತ್ತಿಯಲ್ಲಿ ಅದೂ ಒಂದು ಭಾಗವಾಗಿದ್ದುದರಿಂದ ಆಳು ಲೆಕ್ಕ ಇಡುವುದು, ಪುಣ್ಯಕಾರ್ಯವಾದ್ದರಿಂದ ದೇವರ ಪೂಜೆ ಮಾಡುವುದು; ಇತ್ಯಾದಿ ಇತ್ಯಾದಿ ಚಿಲ್ಲರೆ ಕೆಲಸಗಳನ್ನು ಸಾಂಗವಾಗಿ ನೆರವೇರಿಸುತ್ತಿದ್ದರು. ನಮಗೆ ಭಾನುವಾರ ರಜಾ; ಜೊತೆಗೆ ಅಭ್ಯಂಜನದ ಸಜಾ. ಆ ದಿನ ಎಲ್ಲಿಯಾದರೂ ತಿರುಗಾಡಿ ಹಣ್ಣುಗಿಣ್ಣು ಕಿತ್ತು ಮರಗಿರ ಹತ್ತಿ ಕಲ್ಲುಗಿಲ್ಲು ಹೊಡೆದು ತಲೆಗಿಲೆ ಒಡೆದು ಏನಾದರೂ ಒಂದು ಸಾಹಸಗೀಹಸ ಮಾಡಿ ಬೇಜಾರು ಕಳೆದುಕೊಳ್ಳೋಣ ಎಂದರೆ ಹಾಳು ಅಭ್ಯಂಜನ ಬಂದು ನಮಗೆಲ್ಲ ಬಹಳ ತೊಂದರೆಯಾಗುತ್ತಿತ್ತು. ಬೆಳಗಿನ ಆರು ಗಂಟೆಯಿಂದ ರಾತ್ರಿ ಎಂಟುಗಂಟೆಯವರೆಗೂ ಎಣ್ಣೆ ಸ್ನಾನದ ತೀರ್ಥಯಾತ್ರೆ! ಅದೇನು ಒಬ್ಬರೇ? ಇಬ್ಬರೇ? ಮನೆಯ ಮಂದಿಗೆಲ್ಲ 'ಅಭ್ಯಂಗ'!

ಅದರಲ್ಲಿಯೂ ನಮ್ಮ ಅಜ್ಜಯ್ಯನ ಅಭ್ಯಂಗವೇ ಅರ್ಧ ದಿನವನ್ನು ಆಪೋಶನಮಾಡುತ್ತಿತ್ತು. ಅವರು ವಯಸ್ಸಾದವರು, ದೇವರಲ್ಲಿ ಬಹಳ ಭಕ್ತಿ; ಕಳ್ಳನ್ನು ಬಹಳ ಮಿತವರಿತು ತೀರ್ಥದಂತೆ ಪಾನಮಾಡುತ್ತಿದ್ದರು. ಅನ್ನಕ್ಕಿಂತಲೂ ಅಭ್ಯಂಜನವೇ ಶ್ರೇಷ್ಠ ಎನ್ನುವುದು ಅವರ ಧ್ಯೇಯೋಕ್ತಿಯಾಗಿತ್ತು. ಅಭ್ಯಂಜನ ಮಾಡಿ ಮಾಡಿ ದೇಹ ಸ್ವಲ್ಪ ಸ್ಥೂಲತೆಯ ಕಡೆಗೆ ಒಲೆದಿತ್ತು. ವಾರಕ್ಕೊಂದು ಅಭ್ಯಂಜನ ಮಾಡುತ್ತಿದ್ದರೆ ಅಮೃತತ್ವವು ಲಭಿಸುವುದೆಂದು ಅವರು ತಿಳಿದಿದ್ದಂತೆ ತೋರುತ್ತದೆ. ಆದರೆ, ಪಾಪ, ಕೆಲವು ವರುಷಗಳ ಹಿಂದೆ ಅವರು ತೀರಿಕೊಂಡೇಬಿಟ್ಟರು. ಅವರು ಸ್ವರ್ಗಕ್ಕೆ ಹೋದರು ಎಂದು ನಾನು ತಿಳಿದಿದ್ದೇನೆ. ಅಲ್ಲೇನು ಕಡಿಮೆ! ಎಣ್ಣೆ, ಸೀಗೆಕಾಯಿ, ನೀರು, ಬೆಂಕಿ ಬೇಕಾದಷ್ಟಿದೆ! ಅಪ್ಸರಿಯರೂ ಮಂದೆ ಮಂದೆ ಇದ್ದಾರೆ. ಅಭ್ಯಂಜನ ಮಾಡಿದ್ದೇ ಮಾಡಿದ್ದು! ಅವರೇನು ಸ್ವರ್ಗದಲ್ಲಿ ದಿನಕ್ಕ ಇಪ್ಪತ್ತನಾಲ್ಕುಸಾರಿ ಅಭ್ಯಂಜನಮಾಡುತ್ತಾರೋ ಏನೋ! ಮಾಡಲಿ; ಪಾಪ, ಬೇಕಾದಷ್ಟು ಮಾಡಲಿ! ಮಾನವನ ಈಶ್ವರಪ್ರೇಮಕ್ಕೆ ಅಷ್ಟಾದರೂ ಪ್ರತಿಫಲ ಬೇಡವೇ? ಒಂದಿಷ್ಟು ಅಭ್ಯಂಜನವನ್ನು ಕೊಡಲಾರದ ದೇವರು ಅಮೃತತ್ವವನ್ನು ಕೊಡಬಲ್ಲನೇ?

ನಮ್ಮ ಮನೆಯಲ್ಲಿ ಸ್ನಾನದ ಇಲಾಖೆಯೇ ಪ್ರತ್ಯೇಕವಾಗಿತ್ತು. ಯಾರಿಗೋ ಸಂಬಳಕೊಡಬೇಕೆಂದು ಇಲಾಖೆ ನಿರ್ಮಿತವಾಗಿರಲಿಲ್ಲ; ಪರಂಪರೆಯಿಂದ ಬಂದುದು. ಮಾಮೂಲನ್ನು ತಪ್ಪದೆ ನಡೆಯುತ್ತಿದ್ದ ನಮ್ಮವರು ಬರುವ ಆದಾಯವು ತನ್ನ ಮಾಮೂಲನ್ನು ತಪ್ಪಿ ನಡೆದರೂ ಅಭ್ಯಂಜನದ ಮಾಮೂಲನ್ನು ಮಾತ್ರ ಬಿಟ್ಟಿರಲಿಲ್ಲ. 'ಬಚ್ಚಲು ಮನೆ'ಯೇ ಬೇರೆ. (ಇದೇನು? ಕಣ್ಣು ಕಣ್ಣು ಬಿಡುತ್ತಿದ್ದೀರಿ? ನಾನು ಮೊನ್ನೆ ಹೇಳಿದ್ದನ್ನು ಮರೆತಂತಿದೆ! ನೀವು ಹೀಗೆಲ್ಲ ಮರೆತರೆ ನನ್ನ ಹರಟೆ ತುಂಡುಗಡಿದು ಹೋಗುತ್ತದೆ. ನಮ್ಮ ಕಡೆ ಸ್ನಾನದ ಮನೆಗೆ "ಬಚ್ಚಲು" ಎಂದು ಕರೆಯುತ್ತಾರೆ.) ಬಚ್ಚಲಿನಲ್ಲಿ ಒಂದು ದೊಡ್ಡ ಒಲೆ. ಕಬ್ಬಿಣವನ್ನು ಬೇಕಾದರೂ ಕರಗಿಸಬಹುದು. ಅದ ರಲ್ಲಿ ಆ ಒಲೆಯ ಬಾಯಿ ಮೂರು ಅಡಿ ಎತ್ತರ ಮೂರು ಅಡಿ ಅಗಲ. ಒಲೆಯ ಮೇಲೆ ಎರಡು ದೊಡ್ಡ ಹಂಡೆಗಳನ್ನು ಹೂಳಿರುತ್ತಾರೆ. ಅವುಗಳನ್ನು ತೂತು ಬೀಳುವ ವರೆಗೂ ತೆಗೆಯುವಂತಿಲ್ಲ. ಹೊರಗೆ ತೆಗೆಯಬೇಕಾದರೆ ಅರ್ಧ ಒಲೆಯನ್ನೇ ಕೀಳಬೇಕು. ಆ ಹಂಡೆಗಳ ತುಂಬಾ ನೀರುಹಾಕಿ ಕಾಯಿಸುತ್ತಾರೆ ನೋಡಿ, ತಕಪಕ ತಕಪಕ ಕುದಿಯುವವರೆಗೆ. ಅಕ್ಕಿಹಾಕಿದರೆ ತಕ್ಷಣ ಅನ್ನ ಆಗಿಹೋಗುತ್ತೆ. ಆ ಒಲೆಯ ಬೆಂಕಿಯೇ, ಮೂರುನಾಲ್ಕು ಹೆಣಗಳನ್ನು ಆರೇಳು ನಿಮಿಷಗಳಲ್ಲಿ ಸುಟ್ಟು ಬೂದಿಮಾಡಿ ಬಿಡಬಹುದು! ಕಟ್ಟಿಗೆಗೇನು ಮಲೆನಾಡಿನಲ್ಲಿ? ನಾನು ನೀವೂ ಇಬ್ಬರೇ ಹೊರಟರೆ ಹತ್ತೇ ನಿಮಿಷ ಗಳ ಒಳಗೆ ಏನು ಕಡಿಮೆ ಎಂದರೂ ಒಂದುಗಾಡಿ ಕಟ್ಟಿಗೆ ಒಟ್ಟು ಮಾಡಬಹುದು. ಸಣ್ಣ ಕಡ್ಡಿಗಳನ್ನಲ್ಲ; ಮೈಸೂರಿನ ಬೀದಿಯ ಸಾಲುಮರಗಳಲ್ಲಿ ಕತ್ತಿದೋಟಿಯಿಂದ ಕ್ಷಯರೋಗಹಿಡಿದ ಗಿಡಗಳ ತುದಿಯ ಕೊಂಬೆಗಳನ್ನು ಮುರಿದು ತೆಗೆದುಕೊಂಡು ಹೋಗುತ್ತಾರಲ್ಲಾ ಅಂಥಾ ಕಡ್ಡಿಗಳನ್ನಲ್ಲ; ದೊಡ್ಡ ದೊಡ್ಡ "ಕುಂಟೆ"ಗಳನ್ನು! ನಮ್ಮ ಬಚ್ಚಲುಮನೆಯ ಬೆಂಕಿ ಎಂದರೆ ಏನೆಂದು ತಿಳಿದಿದ್ದೀರಿ, ಸ್ವಾಮಿ? ಬಡಬಾಗ್ನಿಯ ಮರಿ! ಸಾಕ್ಷಾತ್ ಬಡಬಾಗ್ನಿಯ ಮರಿ!

ಭಾನುವಾರ ಅಭ್ಯಂಜನ ಎಂದರೆ ಅರ್ಧಹಬ್ಬ. ಹರಳೆಣ್ಣೆ ಎರಡು

ಬುತ್ತಿ ಸೀಗೆಪುಡಿ ಮನೆಲೆಕ್ಕಕ್ಕೆ ಖರ್ಚು. ನಾವು ಏಳೆಂಟುಜನ ಹುಡುಗರು ನಮ್ಮ ಮನೆಯ ವಿಶ್ವವಿದ್ಯಾನಿಲಯದಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳು. ನಮ್ಮ ಪ್ರಿನ್ಸಿಪಾಲರೆ ನಮ್ಮಲ್ಲಿ ಎಣ್ಣೆಸವರಿಕೊಳ್ಳು ವುದಕ್ಕೂ ಬರದ ಅಂಡರ್ ಗ್ರಾಜುಯೇಟ್‌ಗಳಿಗೆ ಎಣ್ಣೆಹಚ್ಚುವುದು ಉಪಾಧ್ಯಾಯರು ವಿದ್ಯಾರ್ಥಿಗಳೆಂದರೆ ಹಾಗಿರಬೇಕು. ಏನು ಮೈತ್ರಿ! ಏನು ಸೇವೆ? ಎಷ್ಟು ಕರುಣೆ! ಈಗ ಎಲ್ಲಿಯೂ ವಿದ್ಯಾರ್ಥಿಗಳಿಗೂ ಉಪಾಧ್ಯಾಯರುಗಳಿಗೂ ಸಂಬಂಧ ಹೋಯಿತು ಎಂದು ಕೂಗಿಕೊಳ್ಳು ತ್ತಿದ್ದಾರೆ. ನಮ್ಮ ಮನೆಯ ವಿಶ್ವವಿದ್ಯಾನಿಲಯವನ್ನು ಉದಾಹರಣೆ ಯಾಗಿಟ್ಟುಕೊಂಡರೆ ನಮ್ಮ ಈ ಸನಾತನ ಪುರಾತನ ಪವಿತ್ರ ಪುಣ್ಯ ಭೂಮಿಯಾದ ಭಾರತವರ್ಷದ ಸ್ವಾತಂತ್ರದಲಿ ಸಮಗ್ರ ಜಗತ್ತಿಗೇ ಕ್ಷೇಮ ಉಂಟಾಗುವುದರಲ್ಲಿ ಸ್ವಲ್ಪವೂ ಸಂದೇಹವಿಲ್ಲ! ನಗಬೇಡಿ, ಸ್ವಾಮಿ; ನಗಬೇಡಿ! ನನ್ನ ಮಾತಿನ ಅಂತರರ್ಥವನ್ನು ಗ್ರಹಿಸಿನೋಡಿ. ಆಗ ವಿಷಯ ಗೊತ್ತಾಗುವುದು. ಹುಡುಗರ ಜೊತೆಗೆ ದೊಡ್ಡವರು: ಅಪ್ಪಯ್ಯ, ಚಿಕ್ಕಪ್ಪಯ್ಯ, ಸಣ್ಣ ಚಿಕ್ಕಯ್ಯ, ದೊಡ್ಡ ಕಕ್ಕಯ್ಯ, ಅಣ್ಣಯ್ಯ, ಅಜ್ಜಯ್ಯ ಇತ್ಯಾದಿ! ಎರಡು ಆಳುಗಳಿಗೆ ಎಣ್ಣೆ ತಿಕ್ಕೀ ತಿಕ್ಕೀ ಸಾಕಾಗಿ ಹೋಗಬೇಕು ಎಷ್ಟೋಸಾರಿ ಅವರು ಮರುದಿನವೇ ಜ್ವರ ಬಂದು ಹಾಸಿಗೆ ಹಿಡಿದಿದ್ದಾರೆ ಅಂದರೆ! ಇನ್ನೆರಡು ಆಳುಗಳು ನೀರು ಸರಿಮಾಡುವುದು.

ಹಾಗೆಂದರೆ ಏನು ಅನ್ನುವಿರೋ? ಹೇಳುತ್ತೇನೆ! ಲಾಲಿಸ ಬೇಕು! ಎರಡು ಹಂಡೆಗಳಲ್ಲಿ ನೀರು ಕುದಿಯುವುದು ಒತ್ತಟ್ಟಿಗಿರಲಿ. ಅದು ನೀರಿನ ಉಗ್ರಾಣವಾಯ್ತು. ಅಲ್ಲಿಂದ ನೀರನ್ನು ತೆಗೆದು ಬೇರೆ ಕಡಾಯಿಗಳಿಗೆ ಹಾಕಿ ತಣ್ಣೀರು ಬೆರೆಸಿ ಹದಮಾಡುವರು. ನೀರು ಬೆರೆಸಲು ಒಂದು ದೊಡ್ಡ ಅಗಲವಾದ ಬಾಯಿ ಇರುವ ಕಡಾಯಿ ಇರುವುದು. ಅಲ್ಲದೆ ಒಂದು ದೋಣಿಯಿರುವುದು. ಸುಮಾರು ಹನ್ನೆರಡು ಹದಿಮೂರು ಅಡಿಗಳಷ್ಟುದ್ದದ್ದು. ಆ ದೋಣಿ ಏಕೆ ಎನ್ನುವಿರೋ? ಎಣ್ಣೆ ಹಚ್ಚಿಕೊಂಡು ಮೈ ಚೆನ್ನಾಗಿ ನೆನೆದಮೇಲೆ ಅದರಲ್ಲಿ ಮಲಗಿಕೊಳ್ಳುವುದು ಅಭ್ಯಂಜನದ ಒಂದು ಮುಖ್ಯವಾದ

ಅಂಗ. ಆ ನೀರು ಬಿಸಿಬಿಸಿಯಾಗಿರುವುದು. ಅದನ್ನು ಬಿಸಿನೀರು ಎಂದರೆ ತಪ್ಪಾಗಬಹುದು. ಅದರಿಂದ ಸುಡುನೀರು ಎನ್ನುವುದೇ ಉತ್ತಮ ಮತ್ತು ಸತ್ಯಕ್ಕೆ ಹೆಚ್ಚು ಸಮೀಪ. ಅಭ್ಯಂಜನದಲ್ಲಿ ಬಿಸಿ ನೀರನ್ನು ಉಪಯೋಗಿಸುವುದೇ ಇಲ್ಲ; ಎಲ್ಲ ಸುಡುನೀರೆ! ಎಷ್ಟೋ ಸಾರಿ ಹುಡುಗರನ್ನು ಬಲಾತ್ಕಾರದಿಂದ ಎಳೆದುಕೊಂಡುಹೋಗಿ ಅದ ರಲ್ಲಿ ಅದ್ದಿದಾಗ ಅವರು ಕಿಟ್ಟನೆ ಕಿರಿಚಿಕೊಂಡು ಕೆಳಗೆ ಹಾರಿ ಕಲ್ಲಿನ ಮೇಲೆ ಬಿದ್ದು ಗಾಯವಾಗಿದೆ ಅಂದರೆ! ಇಷ್ಟೊಂದು ವಿಧವಿಧವಾದ ಪಾತ್ರೆಗಳಿಗೆ ನೀರು ಹಾಕುವುದು ಇಬ್ಬರಾಳುಗಳಿಗೆ ಸಾಕುಸಾಕಾಗಿ ಹೋಗುತ್ತದೆ.

ಅತ್ತ ಆಳುಗಳು ಅಭ್ಯಂಜನದ ನಾಟಕಕ್ಕೆ ಬೇಕಾದ ಸಲಕರಣೆ ಗಳನ್ನು ಸಿದ್ಧಮಾಡುತ್ತಿರಲು, ಇತ್ತ ಪಾತ್ರಧಾರರು ಎಣ್ಣೆ ಹಚ್ಚಿ ಕೊಳ್ಳುತ್ತಿರುವುದೊಂದು ಸುಮನೋಹರ ದೃಶ್ಯ. ಮಸಿಯುಲ್ಲಲ್ಲ ಹರಳೆಣ್ಣೆಯಲ್ಲಿ. ಅದನ್ನು ಬರೆದರೂ ಆ ವರ್ಣನೆಯು ಸರಿಯಾಗಿ ಅಪಿ ರ್ಭವಿಸುವುದು ಅಸಾಧ್ಯ. ಪ್ರಿನ್ಸಿಪಾಲರಾದ ನಮ್ಮ ಐಗಳು ಕಿರಿಯ ರಿಗೆ ಎಣ್ಣೆ ಹಚ್ಚಿ ಹಚ್ಚಿ ಬಿಡುತ್ತಿರುವರು. ಅದೊಂದು ದೊಡ್ಡ ಗೋಳು. ತಿಮ್ಮು ಎಣ್ಣೆ ಹಚ್ಚಿಸಿಕೊಳ್ಳುತ್ತಾ ಕಿಟ್ಟನೆ ಕೂಗಿಕೊಂ ಡನು. ಏಕೆ ಎಂದರೆ, ಮೊನ್ನೆ ಮಾವಿನ ಮರದಿಂದ ಕೆಳಗೆ ಹಾರಿದಾಗ ಬಿದ್ದು ಗಾಯವಾಗಿದ್ದನ್ನು ಯಾರಿಗೂ ಹೇಳದೆ ಮುಚ್ಚಿಟ್ಟಿದ್ದನು. ಐಗಳು ಅದನ್ನು ಅರಿಯದೆ ಕುದುರೆ ಮಾಲೀಸು ಮಾಡುವಂತೆ ಎಣ್ಣೆ ತಿಕ್ಕಿಯೇ ತಿಕ್ಕಿದರು. ಹಾಗೆ ಮಾಡುವಾಗ ಕೀತುಹೋದ ಗಾಯವು ಹಸಿದುಕೊಂಡು ಇದ್ದಕ್ಕಿದ್ದಂತೆ ದೃಗ್ಗೋಚರವಾಯಿತು. ಅಂತೂ ಗಾಯದ ನೋವಿಗೋ ಗುಟ್ಟು ಬಯಲಾಯಿತಲ್ಲಾ ಎಂದೋ ಗೊಳೋ ಎಂದು ಅಳುತ್ತಿದ್ದಾನೆ. ಅವನನ್ನು ಸಮಾಧಾನ ಮಾಡಿದ್ದೇ ತಡ, ವಾಸು ಕೂಗುತ್ತಿದ್ದಾನೆ. ಏನು? ತಲೆಗೆ ಹಾಕಿದ ಎಣ್ಣೆಯು ಶಿವನ ತಲೆಯ ಜಡೆಗಳಿಂದ ಹೊರಟ ಶ್ರೀಮದ್ ಗಂಗೆಯಂತೆ ಮೆಲ್ಲನೆ ಕೇಶ ರಾಶಿಗಳಿಂದ ಉಚ್ಚಳಿಸಿ ಲಲಾಟದ ಮಾರ್ಗವಾಗಿ ಭ್ರೂಮಧ್ಯೆ ಇಳಿದು ಕಮಲನಯನಗಳನ್ನು ಪ್ರವೇಶಿಸಿಬಿಟ್ಟಿತು! ನೆಗೆನೆಗೆದು ಬಿದ್ದು

ಬಿದ್ದು ಕಿರಿಚಿಕೊಳ್ಳುತ್ತಿದ್ದಾನೆ. ಸರಿ; ಐಗಳು ಓಬುಗೆ ಎಣ್ಣೆ ಹಚ್ಚು ವುದನ್ನು ನಿಲ್ಲಿಸಿ ವಾಸುವಿನ "ರಿಲೀಫ್ ವರ್ಕ್"ಗೆ ಹೊರಟರು. ಬಟ್ಟೆ ಯಿಂದ ಕಣ್ಣು ಜಜ್ಜಿಹೋಗುವಂತೆ ಒರಸಿದ್ದಾಯಿತು. ಆದರೆ ಆ ಗಲಾಟೆಯಲ್ಲಿ ತಲೆಯಲ್ಲಿದ್ದ ಕಜ್ಜಿಯ ಜ್ಞಾಪಕವೇ ಅವರಿಗಾಗಲಿಲ್ಲ. ಅದನ್ನು ಎಡಗೈಯಿಂದ ಒಲವಾಗಿ ಅದುಮಿದ್ದರಿಂದ ಆವನು ಮತ್ತೂ ಕುಣಿದು ಕೂಗತೊಡಗಿದನು. ಅಲ್ಲಿ ನೋಡಿ! ಅಲ್ಲಿ ನೋಡಿ! ಮಾನು ಎಣ್ಣೆಯ ಕುಡಿಕೆಯನ್ನೇ ಮಗುಚಿಹಾಕಿದನು! ಅವನಿಗೂ ಭೂದೇವಿ ಗೂ ಸ್ಪರ್ಧೆ ತೊಡಗಿದೆ. ಭೂದೇವಿಯು ತೈಲವನ್ನು ಪಾನಮಾಡಲು ಯತ್ನಿಸುತ್ತಿದ್ದಾಳೆ; ಮಾನು ಆದಷ್ಟನ್ನು ಬಳಿದು ಬಳಿದು ಮೈಗೆ ಬಳಿಯುತ್ತಿದ್ದಾನೆ. ಆ ಭರದಲ್ಲಿ ಮಣ್ಣೆಲ್ಲಾ ಮೈಗಾಗಿಹೋಗಿದೆ! ಈ ಅನಾಹುತವನ್ನು ನೋಡಿದ ಚಿಕ್ಕಯ್ಯ ರೇಗಿ ಎದ್ದು ಮಾನುಗೆ ದಿಡ್ ಎಂದು ಒಂದು ಗುದ್ದು ಕೊಟ್ಟರು. ಅವನು ಮೌನವಾಗಿ ರೋದಿಸುತ್ತ ಮೂಲೆ ಸೇರಿ ಪೊರಕೆಯಾಗಿಬಿಟ್ಟನು. ಹುಡುಗರ ಗುಂಪಿನಲ್ಲಿ ಹೀಗೆ ಘಟನೆಗಳ ಮೇಲೆ ಘಟನೆಗಳು ಪ್ರಾಪ್ತವಾಗುತ್ತಿರ ಲಾಗಿ ದೊಡ್ಡವರ ಮೈಗೆ ಆಳುಗಳು ಎಣ್ಣೆ ಉಜ್ಜುತ್ತಿದ್ದಾರೆ. ಕೆಲ ವರು ಗರಡಿಯಲ್ಲಿ ಕಸರತ್ತು ಮಾಡುವರಂತೆ ಹುಂ ಉಸ್ ಹುಂ ಉಸ್ ಎನ್ನುತ್ತಿದ್ದಾರೆ. ಅಜ್ಜಯ್ಯ ದೂರದಲ್ಲಿ ಕುಳಿತು ಎಣ್ಣೆ ಉಜ್ಜಿಸಿಕೊ ಳ್ಳುತ್ತಿದ್ದಾರೆ. ಅವರ ಮೈಯೆಲ್ಲ ತೈಲಮಯ. ಆಳು ತಲೆಗೆ ಎಣ್ಣೆಹಾಕಿ ಪಟ್ ಪಟ್ ಎಂದು ಮದ್ದಲೆ ಬಡಿಯುವಂತೆ ಬಿಡುವಿಲ್ಲದೆ ಬಡಿಯು ತ್ತಿದ್ದಾನೆ. ಆ ಏಟಿಗೆ ಅಭ್ಯಾಸವಿಲ್ಲದವರಾಗಿದ್ದರೆ ಮಿದುಳು ಕದಡಿ ಹೋಗುತ್ತಿದ್ದರು. ಆದರೆ ಅಜ್ಜಯ್ಯ ಅಚಲದಂತೆ ಧೀರವಾಗಿ ಕುಳಿ ತಿದ್ದಾರೆ. ಈ ಮಧ್ಯೆ ಅವರು ಎಣ್ಣೆ ಹಚ್ಚಿಕೊಳ್ಳುವುದನ್ನು ಪ್ರಾರಂ ಭಿಸುವಾಗ ಮಾಡುವ ಕರ್ಮಕ್ರಿಯೆಗಳನ್ನು ಹೇಳಿದರೆ ಅಪ್ರಕೃತ ವಾಗದು. ಅಲ್ಲಿ ನೋಡಿ! ಅವರ ಮುಂದೆ ನೆಲದ ಮೇಲೆ ಬೆರಳಿನಿಂ ದಿಟ್ಟ ಏಳು ಎಣ್ಣೆಯ ಚುಕ್ಕಿಗಳಿವೆ. ಅವು ಅಶ್ವತ್ಥಾಮ ಹನುಮಂತ ಮೊದಲಾದ ಪುರಾಣಪ್ರಸಿದ್ಧರಾದ ಸಪ್ತಚಿರಂಜೀವಿಗಳ ಸ್ಮಾರಕತೈಲ ಬಿಂದುಗಳು. ಅದಾದಮೇಲೆ ಅವರು ಏನೇನೋ ಬಾಯಲ್ಲಿ ಮಟ

ಗುಟ್ಟುತ್ತ ಬಂಗಾಳದ ವೈಷ್ಣವರು ನಾಮಗಳನ್ನು ಬಳಿದುಕೊಳ್ಳು ವಂತೆ ಎದೆ, ಹೊಟ್ಟೆ, ತೋಳು, ಬೆನ್ನು ಮೊದಲಾದ ಕಡೆ ಎಣ್ಣೆಯ ಪಟ್ಟೆಗಳನ್ನು ಇಟ್ಟುಕೊಂಡು ಆಳಿಗೆ ಎಣ್ಣೆ ಉಜ್ಜಲು ಅಪ್ಪಣೆ ಕೊಡು ವರು. ಈ ಪ್ರಾರಂಭೋತ್ಸವವನ್ನು ನಾವು ಬಹಳ ಭಯಭಕ್ತಿಗಳಿಂದ ದೇವರಿಗೆ ಮಾಡುವ ಮಂಗಳಾರತಿಯನ್ನು ನೋಡುವಂತೆ ನೋಡು ತ್ತಿದ್ದೆವು.

ಇಷ್ಟು ಹೊತ್ತಿಗೆ ದೊಡ್ಡ ಬೋಗುಣಿಯಲ್ಲಿ ಪಾನಕವು ಸಿದ್ಧ ವಾಗುವುದು. ಎಣ್ಣೆ ಹಚ್ಚಿ ಆಯಾಸಪಟ್ಟವರಿಗಲ್ಲ; ಹಚ್ಚಿಸಿಕೊಂಡು ಆಯಾಸಪಟ್ಟವರಿಗೆ. ಅಲ್ಲದೆ ಅಭ್ಯಂಜನದ ನಡುವೆ ಬಿಸಿನೀರು ಎಂದು ಶಕ್ತಿಗುಂದಿದವರಿಗೂ ಪಾನಕ ಕೊಟ್ಟು ಪುನಃ ನಶೇಷವಾದ ಸ್ನಾನವನ್ನು ಪೂರ್ತಿಯಾಗಿ ಪೂರೈಸಲು ಶಕ್ತಿಬರುವಂತೆ ಮಾಡುವುದು ರೂಢಿಯಾಗಿತ್ತು. ಅಷ್ಟು ಬಿಸಿಬಿಸಿಯಾದ ಸುಡುನೀರನ್ನು ಹೇಗೆ ಮಿಂಯುತ್ತಿದ್ದೆವೋ ನಾನರಿಯೆ. ಈಗ ಅದನ್ನು ನೆನೆದರೆ ಸಾಕು ನನಗೆ ಜೆವರುಬರುವ ಹಾಗೆ ಆಗುತ್ತದೆ! ಆ ಬಿಸಿನೀರಿನ ದೋಣಿಯಲ್ಲಿ ಅರ್ಧಗಂಟೆ ಮಲಗಿ ಅಲ್ಲಿಂದ ಕೆಳಗೆ ಇಳಿಯಲು ಶಕ್ತಿಸಾಲದೆ ಇತರರ ಸಹಾಯದಿಂದ ಕೆಳಗಿಳಿದರೆ, ಕೂಡಲೇ ಕಡಾಯಿಯಲ್ಲಿ ಸಿದ್ಧವಾಗಿದ್ದ ಸುಡುನೀರನ್ನು ತಲೆಯ ಮೇಲೆ ರಫ್‌ರಫ್ ಎಂದು ಹಾಕುವರು. ಶಿಥಿಲವಾಗಿದ್ದ ಜೀವವು ಮತ್ತೂ ಶಿಥಿಲವಾಗಿ ನಿಲ್ಲಲಾರದೆ ಕೊಳದ ಕಲ್ಲಿನ ಮೇಲೆ ಕುಳಿತರೆ ಒಬ್ಬರಲ್ಲ ಇಬ್ಬರು ಸೀಗೆಯಿಂದ ಮೈಯುಜ್ಜ ಲು ತೊಡಗುವರು. ಅವರ ತಿಕ್ಕಾಟ ಒಳಿದಾಟದಲ್ಲಿ ಮೂರ್ಛೆಬರು ವಷ್ಟಾಗುವುದು. ಆಮೇಲೆ ತಲೆಯಲ್ಲಿದ್ದ ಹರಳೆಣ್ಣೆಯು ಸಂಪೂರ್ಣ ವಾಗಿ ಹೋಗುವಂತೆ ತಲೆಯುಜ್ಜುವರು. ಆ ಸಮಯದಲ್ಲಿ ಅಳದೆ ಇರುವ ಹುಡುಗರೇ ಇಲ್ಲ. ಕಣ್ಣನ್ನು ಎಷ್ಟು ಬಲವಾಗಿ ಮುಚ್ಚಿ ದರೂ ಸೀಗೆಯ ನೀರು ಹೇಗಾದರೂ ಮಾಡಿ ಒಳಗೆ ನುಗ್ಗಿಯೇ ನುಗ್ಗುವುದು. ಸ್ನಾನ ಮುಗಿಯುವಷ್ಟರಲ್ಲಿ ಮೈಯೆಲ್ಲ ಹಣ್ಣಾಗಿ ಹುಣ್ಣಾಗಿ ಕಣ್ಣೆನಂತೆಯೇ ಕೆಂಪಾಗಿ ನಿಲ್ಲಲಾರದಷ್ಟು ಶಕ್ತಿಗುಂದದೆ ಇದ್ದರೆ ಅದು ನಿಜವಾದ ಅಭ್ಯಂಜನ ಅಲ್ಲವೇ ಅಲ್ಲ ಎಂದು ನಮ್ಮ

ವರ ನಂಬುಗೆ. ಸ್ನಾನ ಮುಗಿಯಿತು. ಐಗಳು ಹುಡುಗನನ್ನು ಮೆಲ್ಲನೆ ಕೈಹಿಡಿದು ನಡೆಯಿಸಿಕೊಂಡು ಹೋಗಿ ಸಿದ್ಧವಾಗಿದ್ದ ಹಾಸುಗೆಯ ಮೇಲೆ ಮಲಗಿಸುವರು. ಚೆನ್ನಾಗಿ ಬೆವರಲಿ ಎಂದು ಶಾಲು, ಕಂಬಳಿ, ರಗ್ಗು ಎಲ್ಲವನ್ನೂ ಮುಖಮುಚ್ಚಿ ಹೊದಿಸುವರು. ಒಳಗೆ ಪ್ರಾಣಿಯು ಬೆವತೂ ಬೆವತೂ ಹಾಸಿಗೆಯೆಲ್ಲ ತೊಯ್ದುಹೋಗುವುದು. ಹೀಗೆ ಹುಡುಗರನ್ನು ಒಬ್ಬೊಬ್ಬರನ್ನಾಗಿ ಹಣ್ಣುಹಣ್ಣುಮಾಡಿ ಹಾಸುಗೆಗೆ ತಳ್ಳಿದ ಮೇಲೆ ದೊಡ್ಡವರ ಸ್ನಾನ ಪ್ರಾರಂಭವಾಗುವುದು. ಕಡೆಯಲ್ಲಿ ನಮ್ಮ ಅಜ್ಜಯ್ಯನವರ ಅಭ್ಯಂಜನ. ಎಲ್ಲರಿಗೂ ಹೆದರಿಕೆ!

ಅಜ್ಜಯ್ಯಗೆ ಎಲ್ಲರಗಿಂತಲೂ ಹೆಚ್ಚು ಬಿಸಿಯಾದ ನೀರು ಬೇಕು. ಅವರು ಮಿಂಯುವ ನೀರಿಗೆ ನಾವು ಕೈಯಿಟ್ಟರೆ ಫಕ್ಕನೆ ಹೊರಗೆ ಎಳೆದುಕೊಳ್ಳುವಂತಾಗುತ್ತಿತ್ತು. ಅಭ್ಯಂಜನದ ಕಾಲದಲ್ಲಿ ಅವರು ಎರಡುಮೂರು ಸಾರಿಯಾದರೂ ಮೂರ್ಛೆಹೋಗದೆ ಇರುತ್ತಿರಲಿಲ್ಲ. ಅಷ್ಟೊಂದು ಬಿಸಿಯಾದ ನೀರನ್ನು ಮಿಂದರೆ ಯಾರಿಗೆ ತಾನೇ ಮೂರ್ಛೆ ಬರುವುದಿಲ್ಲ? ಅದರಲ್ಲಿಯೂ ಸ್ವಲ್ಪ ವಯಸ್ಸು ಹೋದವರು. ಅವರು ದೋಣಿಯಲ್ಲ ದೀರ್ಘಕಾಲ ಮಲಗುವರು. ಏಳುವಾಗ ಒಂದು ಲೋಟ ಪಾನಕ ಕುಡಿಯುವರು. ಆ ಮೇಲೆ ಕೊಳದಲ್ಲಿ ಕುಳಿತು ತಲೆಯ ಮೇಲೆ ಸುಡುನೀರು ಹಾಕಿಸಿಕೊಳ್ಳುವರು. ಒಬ್ಬರಲ್ಲ ಇಬ್ಬರು, ಚೊಂಬುಗಳಲ್ಲ ಕಡಾಯಿಯಿಂದ ಹೊಗೆಹೊಗೆದು ಎಡೆಬಿಡದೆ ನೀರನ್ನು ಎತ್ತರದಿಂದಲೇ ರಪ್‌ರಪ್ ಎಂದು ನೆತ್ತಿಗೆ ಹೊಡೆಯುವರು. ಈ ದ್ವಿತೀಯ ಕರ್ಮವಾದ ಮೇಲೆ ಒಂದು ಲೋಟ ಪಾನಕ ಖರ್ಚಾಗುತ್ತಿತ್ತು. ಆಮೇಲೆ ಆಳುಗಳು ಮೈಕೈಗಳನ್ನೂ ತಲೆಯನ್ನೂ ಸೀಗೆಯಿಂದ ಗಸಗಸ ಉಜ್ಜುವರು. ಪುನಃ ಸುಡುನೀರು ಜಲಪಾತದಂತೆ ತಲೆಯ ಮೇಲೆ ಬೀಳುತ್ತಿತ್ತು. ಇಷ್ಟು ಹೊತ್ತಿಗೆ ಮೂರ್ಛೆಹೋಗಿ ಕೊಳದ ಕಲ್ಲಿನ ಮೇಲೆ ಮಲಗಿಬಿಡುತ್ತಿದ್ದರು. ಆಗ ಹಾಹಾಕಾರವೆದ್ದು ಜನಗಳು ಹಿಂದೆಮುಂದೆ ಓಡಾಟ ಮಾಡುವುದೇ ಕಾರ್ಯದಕ್ಷತೆಯ ಚಿಹ್ನೆ ಎಂದು ತಿಳಿದುಕೊಂಡಂತೆ ತೋರುತ್ತಿತ್ತು. ಒಳಗಿನಿಂದ ಅಜ್ಜಮ್ಮನು ಬರುತ್ತಿದ್ದರು. ಕೆಲವರು

ಪಾನಕ ಕುಡಿಸುವರು; ಕೆಲವರು ತಣ್ಣೀರನ್ನು ತಲೆಗೆ ತಟ್ಟುವರು; ಕೆಲವರು ಗಾಳಿಬೀಸುವರು; ಕೆಲವರು ತೋಟದಾಚೆಯ ಭೂತರಾಯನಿಗೆ ಅಡ್ಡಬಿದ್ದು ಅಜ್ಜಯ್ಯನನ್ನು ಸಂರಕ್ಷಿಸುವಂತೆ ಅಂಗಲಾಚಿ ಬೇಡುವರು. ಅಂತೂ ಸ್ವಲ್ಪಹೊತ್ತಿಗೆ ಅಜ್ಜಯ್ಯನ ಮೂರ್ಛೆಯು ಕೊನೆಗಂಡು 'ಅಮ್ಮಯ್ಯ' 'ನಾರಾಯಣ' ಮೊದಲಾದ ಶಬ್ದಗಳು ಅವರ ಬಾಯಿಯಿಂದ ಹೊರಬಿದ್ದು ಎಲ್ಲರಿಗೂ ಧೈರ್ಯವನ್ನುಂಟು ಮಾಡುತ್ತಿದ್ದುವು. ಸರಿ, ಮತ್ತೆ ಜಳಕ! ಮತ್ತೆ ಮೂರ್ಛೆ! ಹೀಗಾಗಿ ಕೊನೆಗೆ ಸ್ನಾನ ಕೊನೆಗಾಣುವುದು. ಅವರಿಗೆ ನೀರರೆವವರು ಕೈಗಳನ್ನು ಆಗಾಗ ತಣ್ಣೀರಿನಲ್ಲಿ ಅದ್ದಿ ತಂಪುಮಾಡಿಕೊಂಡರೂ ಆ ಬಿಸಿನೀರಿನ ತಾಪವು ಶಮನವಾಗುತ್ತಿರಲಿಲ್ಲ; ಅಷ್ಟು ಬಿಸಿ ಅವರು ಏಹಾಯುವ ನೀರು! ಅಜ್ಜಯ್ಯನ ಸ್ನಾನ ಕೂನೆಗಾಣುವಾಗ ಅವರು ಗಂಗೆ ಯಮುನೆ ಮೊದಲಾದ ಪುಣ್ಯನದಿಗಳ ಹೆಸರಿನ ಪಟ್ಟಿಯೊಂದನ್ನು ಗಟ್ಟಿಯಾಗಿ ಉಚ್ಚರಿಸಿ ನಾಲ್ಕು ದಿಕ್ಕುಗಳಿಗೂ ಕೈಮುಗಿಯುತ್ತಿದ್ದರು. ಇಬ್ಬರು ಅವರ ಎರಡು ಕೈಗಳನ್ನು ಹಿಡಿದು ಹಾಸಿಗೆಗೆ ಕರೆದೊಯ್ಯುತ್ತಿದ್ದರು. ಹೋಗುವಾಗ ಅವರ ಮೈ ಹೊಗೆಯಾಡುವಂತೆ ಕಾಣುತ್ತಿತ್ತು. ಅಲ್ಲಿ ಸಿದ್ಧವಾಗಿದ್ದ ಕಂಬಳಿ ಮೊದಲಾದುವುಗಳನ್ನು ಮೈತುಂಬಾ ಹೊದೆದುಕೊಂಡು ಮಲಗಿ ಬೆವರಿಸಿಕೊಳ್ಳುತ್ತಿದ್ದರು. ಅವರು ಆ ದಿನ ರಾತ್ರಿ ಊಟಮಾಡುತ್ತಿರಲಿಲ್ಲ. ಬರಿಯ ಹಾಲನ್ನೇ ಕುಡಿದು ಮಲಗಿಬಿಡುವರು.

ಅವರ ಕಾಲವು ಆಗಿಹೋಯಿತು. ಅವರೊಡನೆ ಆ ಅಭ್ಯಂಜನದ ಮಹೋತ್ಸವವೂ ಮರೆತುಹೋಯಿತು.

---

# ಬಂದನಾ ಹುಲಿರಾಯನು

ರಂಗಯ್ಯ ಆ ದಿನ ಮರಸಿಗೆ ಹೊರಟಾಗ ಬೈಗಾಗಿತ್ತು. ಮೊನ್ನೆ ಹರಟುತ್ತಿದ್ದಾಗ ನಿಮಗೆ ಮರಸುಬೇಟೆಯ ವಿಚಾರವಾಗಿ ಒಂದೆರಡು ಮಾತು ಹೇಳಿದ್ದೆ. ನಿಮಗೆ ನೆನಪಿರಬಹುದು. ಇಂದು ಸ್ವಲ್ಪ ವಿಶದ ವಾಗಿ ಹೇಳುತ್ತೇನೆ.

ಮರಸುಬೇಟೆ ಎಂದರೆ ಮೃಗಗಳಿಗಾಗಿ ಒಂದೆಡೆ ಕುಳಿತು ಕಾಯುವುದು. ಬೇಟೆಗಾರನು ಕೆಲವು ಸಾರಿ ಮರಗಳ ಮೇಲೆ ಕೂ ರುತ್ತಾನೆ. ಇನ್ನು ಕೆಲವು ಸಾರಿ ನೆಲದಮೇಲೆಯೇ ಪೊದೆಗಳ ನಡುವೆ ಮರೆಮಾಡಿಕೊಂಡು ಕೂತು ಪ್ರಾಣಿಗಳು ಬರುವುದನ್ನೇ ಜಾಗರೂ ಕತೆಯಿಂದ ಸಿರೀಕ್ಷಿಸುತ್ತಾನೆ. ಮರಸುಬೇಟೆಗೆ ತಕ್ಕಸಮಯ ಎಂದರೆ ಪ್ರಾತಃಕಾಲ, ಸಂಧ್ಯಾಕಾಲ, ಬೆಳ್ದಿಂಗಳು ರಾತ್ರಿ. ಪ್ರಾಣಿ ಗಳು ಸಂಜೆಯಾಗಲು ಅರಣ್ಯದ ಮಧ್ಯದಿಂದ ಇಳಿಯಲು ತೊಡಗು ವುವು. ಏಕೆಂದರೆ ಕಣಿವೆಗಳಲ್ಲಿ, ಗದ್ದೆಗಳಲ್ಲಿ ಅವುಗಳಿಗೆ ಮೇವು ಸಿಕ್ಕು ವುದು ಸುಲಭ. ಹಂದಿ, ಕಾಡುಕುರಿ, ಜಿಂಕೆ ಮೊದಲಾದ ಪ್ರಾಣಿ ಗಳು ಪೈರಿಗೆ ಮಾರಿಗಳು. ಬೇಟೆಗಾರರು ಜೀವಿಗಳು ಇಳಿದುಬರುವ ಮಾರ್ಗಗಳನ್ನು ಅನುಭವದಿಂದಲೋ ಅಥವಾ ಐತಿಹ್ಯದಿಂದಲೋ ಅರಿತು ಅಂತಹ ಕಂಡಿಗಳನ್ನು ಕಾಯುವರು. ಆದ್ದರಿಂದ ಕಾಡಿನಿಂದ ಕೆಳಗಿಳಿವ ಪ್ರಾಣಿಗಳನ್ನು ಹೊಡೆಯಬೇಕಾದರೆ ಸಾಯಂಕಾಲವು ಸುಸಮಯ. ಹಾಗೆ ಇಳಿದ ಪ್ರಾಣಿಗಳು ರಾತ್ರಿಯೆಲ್ಲ ಗದ್ದೆಗಳನ್ನೋ, ತೋಟಗಳನ್ನೋ ಲೂಟಿಮಾಡಿ ಉಷಃಕಾಲಕ್ಕೆ ಸರಿಯಾಗಿ ಪುನಃ ಅರಣ್ಯಾಭಿಮುಖವಾಗಿ ಮೇಲೇರುವುವು. ಆದ್ದರಿಂದ ಬಯಲಿನಿಂದ ಮೇಲೇರುವ ಜೀವಾದಿಗಳನ್ನು ಸುಡಬೇಕಾದರೆ ಬೆಳಗಿನ ಜಾವವು ಪ್ರಶಸ್ತವಾದುದು. ಇನ್ನು ಕಾಡಿನಲ್ಲಿ ಹಣ್ಣಿನ ಮರಗಳಿದ್ದರೆ

ಅಲ್ಲಿಯೂ ಕೂಡ ಪ್ರಾಣಿಗಳನ್ನು ಎದುರುಗೊಳ್ಳುವುದು ಸುಲಭ. ವಿಶೇಷವಾಗಿ ಅವು ಹಣ್ಣಿನ ಮರಗಳಿಗೆ ಬರುವುದು ಬೆಳಿಗ್ಗೆ ಎಂಟು ಗಂಟೆಯ ಒಳಗೆ, ಅಥವಾ ಸಾಯಂಕಾಲ ಐದು ಗಂಟೆಯ ಮೇಲೆ. ಬೆಳ್ದಿಂಗಳ ರಾತ್ರಿಯಲ್ಲಿ ರಾತ್ರಿ ಎಷ್ಟು ಹೊತ್ತಿಗಾದರೂ ಬರಬಹುದು. ನಾನು ಹಿಂದೆ ನಿಮಗೆ ಕಾಡಿನಲ್ಲಿ ಕಳೆದ ಒಂದಿರುಳಿನ ಅನುಭವವನ್ನು ಹೇಳಿದ್ದೇನೆ. ಅದನ್ನು ಮರೆತಿರಲಾರಿರಿ. ಮರೆತಿದ್ದರೆ ಮರಳಿ ಓದಿ ನೋಡಿ.

ಮಲೆನಾಡಿನ ಕಾಡುಗಳಲ್ಲಿ ಹಣ್ಣಿನ ಮರಗಳಿಗೆ ಬರಗಾಲವಿಲ್ಲ. ಅವರಲ್ಲಿಯೂ ವಸಂತಋತುವಿನಲ್ಲಿ ಕೇಳಬೇಕಾದುದೇ ಇಲ್ಲ. ಎಲ್ಲಿ ನೋಡಿದರೂ ಹಣ್ಣು! ಎತ್ತ ನೋಡಿದರೂ ಹೂವು! ಕಾಡಿಗೆ ಹಣ್ಣು ಹೂವುಗಳ ಹುಚ್ಚು ಹಿಡಿದುಹೋಗಿರುವಂತೆ ತೋರುವುದು. ಕಾಡು ಮಾವಿನ ಮರದ ಹಣ್ಣು, ನೇರಿಲಹಣ್ಣು, ಸೂಣೆಹಣ್ಣು, ಕಲ್ಲು ಸಂಪಗೆ ಹಣ್ಣು, ಕಣಗಿಲು ಹಣ್ಣು, ಗೋಳಮಟೆ ಹಣ್ಣು, ಇಪ್ಪೆ ಹಣ್ಣು, ಹೆಬ್ಬಲಸಿನ ಹಣ್ಣು, ಹಲಸಿನ ಹಣ್ಣು ಇವೇ ಮೊದಲಾದ ಹಣ್ಣುಗಳು ಸೂರೆಹೋಗಿರುವುವು. ನೀವು ಒಂದು ಪ್ರಶ್ನೆ ಹಾಕ ಬಹುದು. ಏನೆಂದರೆ, ಕಾಡಿನಲ್ಲಿ ತುಂಬಾ ಜಂತುಗಳಿದ್ದರೆ ಯಾವಯಾವ ಮರಗಳಿಗೆ ಯಾವ ಯಾವ ಜಂತುಗಳು ಯಾವಾಗ ಬರುತ್ತವೆ? ಬೇಟೆಗಾರರಿಗೆ ಈ ಪ್ರಶ್ನೆ ಅಷ್ಟೇನೂ ಗಹನವಾದುದಲ್ಲ. ಎಲ್ಲ ಮಾವಿನ ಮರದ ಹಣ್ಣುಗಳಿಗೂ ಒಂದೇ ತರದ ರುಚಿಯಿರುವುದಿಲ್ಲ. ಆದ್ದರಿಂದ ಪ್ರಾಣಿಗಳು ರುಚಿಯಿರುವ ಹಣ್ಣಿನ ಮರಗಳಿಗೇ ಬರುವುವು. ನಾನೇ ಎಷ್ಟೋ ಕಾಡುಮಾವಿನ ಮರಗಳ ಹಣ್ಣುಗಳನ್ನು ತಿಂದು ನೋಡಿ ದ್ದೇನೆ. ಕೆಲವು ಹುಳಿ ಹೆಚ್ಚು. ಕೆಲವು ಸಿಹಿ ಹೆಚ್ಚು. ಕೆಲವು ಒಗರು. ಕೆಲವು ಸಪ್ಪೆ. ಹಣ್ಣಿನ ರುಚಿಯೊಂದೇ ಅಲ್ಲ, ಮರಗಳಿರುವ ಸ್ಥಾನವನ್ನೂ ನಾವು ಗಣನೆಗೆ ತೆಗೆದುಕೊಳ್ಳಬೇಕು. ಸಾಧಾರಣ ವಾಗಿ ಮೃಗಗಳು ಕಾಡಿನ ತುಂಬಾ ವಾಸಮಾಡುವುದಿಲ್ಲ. ಅವುಗಳಿ ಗೂ ಕೂಡ ನಿಯತಸ್ಥಾನಗಳಿರುವುವು; ಹಕ್ಕೆಗಳಿರುವುವು. ಹಕ್ಕೆಗಳಿಗೆ

ಸಮೀಪವಾಗಿ, ಹಣ್ಣು ರುಚಿಯಾಗಿ, ಸ್ಥಳವು ನಿರ್ಜನವಾಗಿ, ಜೀವಿಗಳು ತಿರುಗಾಡುವ ಕಂಡಿಗಳಲ್ಲಿರುವ ಮರಗಳಿಗೆ ಪ್ರಾಣಿಗಳು ಬಂದೇ ಬರುವುವು. ಅಂತಹ ಜಾಗಗಳಲ್ಲಿಯೇ ಬೇಟೆಗಾರರು ಮರಸು ಕೂರುವರು.

ರಂಗಯ್ಯ ಆ ದಿನ ಮರಸಿಗೆ ಹೋದುದು ಹಣ್ಣಿನ ಮರಕ್ಕಲ್ಲ. ಪೈರಿನ ಕಂಪುಗಾಳಿಗೆ ಮೋಹಗೊಂಡು ಪ್ರಾಣಿಗಳು ಬೆಟ್ಟದಿಂದ ಇಳಿದು ಬರುವ ಕಂಡಿಯೊಂದನ್ನು ಕಾಯುವುದಕ್ಕೆ. ಅವನು ಮನೆಯಿಂದ ಹೊರಟಾಗ ಆಗಲೇ ಸಾಯಂಕಾಲವಾಗುತ್ತಿತ್ತು. ಕೇಪಿನ ಕೋವಿಯೊಂದನ್ನು ಹೆಗಲಮೇಲೆ ಹೇರಿಕೊಂಡು, ಕಂಬಳಿಯನ್ನು ಹೊದೆದುಕೊಂಡು, ಎಲೆಯಡಕೆ ಚೀಲವನ್ನೂ ಕೋವಿಯ ಚೀಲವನ್ನೂ ಒಗಲಿಗೆ ಸಿಕ್ಕಿಸಿಕೊಂಡು ಬೆಟ್ಟವೇರಿದನು ನಾಲ್ಕೈದು ಕಂಡಿಗಳನ್ನು ಪರೀಕ್ಷೆಮಾಡಿ ಕಡೆಗೆ ಒಂದುಕಡೆ ಮರಸು ಕೂರಲು ನಿರ್ಧರಿಸಿದನು. ಪೊದೆಗಳ ನಡುವೆ ತನ್ನ ಕತ್ತಿಯಿಂದ ಕಡಿದು ಕೂರಲು ಜಾಗಮಾಡಿ, ಸುತ್ತಲೂ ಹಸುರು ಕೊಂಬೆಗಳನ್ನು ಕಡಿದು ಒಡ್ಡುಹಾಕಿ ಮರೆಮಾಡಿಕೊಂಡು ಕೂತನು. ಕಂಬಳಿಯ ಅರ್ಧಭಾಗವನ್ನು ನೆಲದಮೇಲೆ ಹಾಸಿದ್ದನು. ಉಳಿದ ಅರ್ಧಭಾಗವನ್ನು ಸೊಂಟದವರೆಗೂ ಮುಚ್ಚಿದ್ದನು. ಸಂಜೆಗೆಂಪು ಮೆಲುಮೆಲನೆ ಜಾರುತ್ತಿತ್ತು. ಬೈಗುಗಪ್ಪು ಇಳಿಯುತ್ತಿತ್ತು. ಹಕ್ಕಿಗಳ ಕೂಗಾಟವು ಬರಬರುತ್ತ ಕಡಿಮೆಯಾಗುತ್ತಿತ್ತು. ವನ್ಯಕ್ರಿಮಿಕೀಟಗಳ ಅಸ್ಪಷ್ಟ ಅನಾಹತ ಧ್ವನಿಯು ವಾಯುಮಂಡಲವನ್ನೆಲ್ಲ ಗಂಭೀರವಾಗಿ ತುಂಬಿತ್ತು. ಆದರೂ ಆ ಸದ್ದಿನಿಂದ ವನದ ಮೌನಕ್ಕೆ ಭಂಗ ಬಂದಂತೆ ತೋರುತ್ತಿರಲಿಲ್ಲ. ಭೀಮಾಕಾರವಾದ ವೃಕ್ಷಗಳು ಸ್ತೂಪಾಕಾರವಾಗಿ ಮೇಲೆದ್ದು ನಿಬಿಡ ಪರ್ಣ ವಿತಾನಗಳಿಂದ ಆಕಾಶಮಂಡಲವನ್ನು ಆಚ್ಛಾದಿಸಿದ್ದುವು. ಎಂದಿನಂತೆ ಬನಗತ್ತಲು ಮುಸುಗಿತ್ತು. ಹೆಮ್ಮರಗಳ ನಡುನಡುವೆ ಕ್ಷುದ್ರ ತರುಗುಲ್ಮಲತಾದಿಗಳು ಒಂದನ್ನೊಂದು ಹೆಣೆದುಕೊಂಡಿದ್ದುವು. ಎಲ್ಲಿಯೋ ಒಂದೊಂದು ಎಡೆ ಮಾತ್ರ ಸ್ವಲ್ಪ ಬಿಡುವಿದ್ದಿತು. ಅಂತಹ

ಸ್ಥಳಗಳಲ್ಲಿಯೇ ಪ್ರಾಣಿಗಳು ಗುರಿಗೆ ಸಿಕ್ಕಿ ಬೀಳುವುದು

ರಂಗಯ್ಯ ಕುಳಿತನು. ಸ್ವಲ್ಪಹೊತ್ತು ಕೋವಿಯನ್ನು ಕೈಯಲ್ಲಿ ಹಿಡಿದುಕೊಂಡು ದಿಕ್ಕು ದಿಕ್ಕುಗಳನ್ನು ನೋಡಿದನು. ತರುವಾಯ ಕೋವಿಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತನು. ಸುತ್ತಲೂ ವೀಣಾವಾದ್ಯ ಧ್ವನಿಗೈಯುತ್ತ ಸೊಳ್ಳೆಗಳು ಹಾರಾಡಿ ಕಡಿಯುತ್ತಿದ್ದುವು. ಅವುಗಳನ್ನು ಸದ್ದುಮಾಡದಂತೆ ಅಟ್ಟುತ್ತ ಕುಳಿತನು. ಮರಸಿಗೆ ಕೂತವರು ಅಲ್ಲಾಡಬಾರದು. ಅಷ್ಟೇ ಏಕೆ, ಗಟ್ಟಿಯಾಗಿ ಉಸಿರಾಡಬಾರದು. ಮೈ ಕೆರೆದುಕೊಂಡರೂ ಕೂಡ ಆ ಮಹಾಮೌನದಲ್ಲಿ ಸದ್ದಾಗಿ ಜೀವಿಗಳು ಎಚ್ಚರಗೊಂಡು ಬಂದ ಹಾದಿಯಿಂದ ಹಿಂತಿರುಗುವುವು. ಮೈಮೇಲೆ ಕುಳಿತು ರಕ್ತಹೀರುವ ಸೊಳ್ಳೆಗಳನ್ನು ಕೈಯಿಂದ ತಟ್ಟಿದರೆ ಚಪ್ಪಾಳೆ ಹೊಡೆದ ಸದ್ದಾಗುವುದು. ಆದ್ದರಿಂದ ಒಳ್ಳೆಯ ಸತ್ಯಾಗ್ರಹಿಗಳಂತೆ ಅವುಗಳೇನು ಮಾಡಿದರೂ ಎಷ್ಟು ನೆತ್ತರು ಹೀರಿದರೂ 'ಕಂ ಕಿಂ' ಎನ್ನದೆ ಕೂತಿರಬೇಕು. ಅಟ್ಟಿದರೆ ಮೆಲ್ಲಗೆ ಕೈಯಲ್ಲಾಡಿಸಿ ಅಟ್ಟಬೇಕು. ಮರಸಿಗೆ ಕೂರುವುದೆಂದರೆ ಒಂದು ತಪಸ್ಸೇ ಸರಿ. ಅದನ್ನು ಅನುಭವಿಸಿ ನೋಡಬೇಕು. ಆ ಹಾಳು * ನುಸಿಗಳೂಕೂಡ ಅದನ್ನೇ ಸಮಯವೆಂದು ತಿಳಿದು ತಂಡೋಪತಂಡವಾಗಿ ಬಂದು ತಮ್ಮ ರಕ್ತಶೋಷಕ ಕರಾಳ ದಂಷ್ಟ್ರಗಳನ್ನು ಬಲವಾಗಿ ಊರಿ ಫಜೀತಿ ಪಡಿಸುವುವು. ಅವುಗಳಿಗೆ ಯಾರು ತಂತಿ ಕೊಡುತ್ತಾರೋ ಏನೋ! ಜನರಿಲ್ಲ, ಮಾತಿಲ್ಲ, ಕಾಯುವ ಕೆಲಸವಲ್ಲದೆ ಬೇರೆ ಕೆಲಸವಿಲ್ಲ; ನಿಶ್ಶಬ್ದ, ಸುತ್ತಲೂ ಹೆಗ್ಗಾಡು 'ಬೆಕೋ' ಎನ್ನುತ್ತಿರುವುದು, ವನ್ಯಕ್ರಿಮಿಕೀಟಗಳ ಭಯಂಕರವಾದ ವಿಕಟ ನಿರ್ಘೋಷ; ದೀರ್ಘ ನಿರೀಕ್ಷೆಯ ನಿರ್ವಿಣ್ಣತೆ, ಇವುಗಳ ಜೊತೆಗೆ ಹಾಳು ನುಸಿಗಳ ಯಮಕಾಟ! ಬಲ್ಲವನೆ ಬಲ್ಲ ಬೆಲ್ಲದ ಸವಿಯ! ಅಂತೂ ಬೆಲ್ಲವನ್ನು ಸವಿಯುತ್ತ ಕುಳಿತಿದ್ದನು ರಂಗಯ್ಯ!

---

* ನಮ್ಮ ಕಡೆ ಸೊಳ್ಳೆಗೆ 'ನುಸಿ' ಎನ್ನುತ್ತಾರ

ರಂಗಯ್ಯ ಕುಳಿತಿದ್ದ. ಎಷ್ಟು ಹೊತ್ತು ತಾನೇ ಚಲಿಸದೆ ಸುಮ್ಮನೆ ಕುಳಿತಾನು? ಅದರಲ್ಲಿಯೂ ಮೂರು ಹೊತ್ತೂ ಎಲೆ ಯುಡಿಕೆ ಜಗಿಯುತ್ತಲೇ ಇರುವ ಮಹಾನುಭಾವ ಎಷ್ಟೆಂದು ಸುಮ್ಮ ನಿದ್ದಾನು? ಅತ್ತ ಇತ್ತ ದೃಷ್ಟಿಸಿ ನೋಡುತ್ತ ಸ್ವಲ್ಪ ಸಮಯ ಕಳೆ ಯಿತು. ಆಮೇಲೆ ಆಕಳಿಕೆಗೆ ಪ್ರಾರಂಭವಾಯಿತು. ಕಡೆಗೆ ತೊಡೆಯ ಮೇಲೆ ಅಡ್ಡಲಾಗಿ ಮಲಗಿದ್ದ ಕೋವಿಯನ್ನು ಮೆಲ್ಲಗೆ ತೆಗೆದೆತ್ತಿ ನೆಲದಮೇಲಿಟ್ಟು, ಬಗಲಿನಿಂದ ಎಲೆಯಡಕೆ ಚೀಲವನ್ನು ತೆಗೆದು ವೀಳ್ಯ ಸವಿಯಲು ಪ್ರಾರಂಭಿಸಿದನು. ಕಾಲಹರಣಮಾಡಲು ಎಲೆಯ ಡಕೆಯು ಬಹಳ ಸಹಾಯಮಾಡುತ್ತದೆ. ಇಷ್ಟ ಬಂದರೆ ಅದನ್ನು ಒಂದೆರಡು ನಿಮಿಷಗಳಲ್ಲಿ ಪೂರೈಸಿಬಿಡಬಹುದು. ಬೇಕಾದರೆ ಕಾಲು ಗಂಟೆ ಅರ್ಧಗಂಟೆಗಳನ್ನು ಸಹ ಕಳೆದುಬಿಡಬಹುದು. ಮಲೆನಾಡಿ ನಲ್ಲಿ ಬಾಲ್ಯ ಕಳೆದುದಕ್ಕೆ ಎಲೆಯಡಕೆ ಹಾಕಿಕೊಳ್ಳುವುದು ಒಂದು ಚಿಹ್ನೆ. ಎಂದಮೇಲೆ ಹೊರತಿಲ್ಲದೆ ದೊಡ್ಡವರೆಲ್ಲ ಎಲೆಯಡಕೆ ಹಾಕಿ ಕೊಳ್ಳುವರು. ಅದರಲ್ಲಿಯೂ ಮರಸುಬೇಟೆಗೆ ಹೋಗುವವರಿಗೆ ಏನಾ ದರೂ ಒಂದು ಚಾಳಿ ಇದ್ದೇ ಇರಬೇಕು. ಎಲೆಯಡಕೆ ಹಾಕಿಕೊ ಳ್ಳುವವರು ಕೆಲರು, ನಶ್ಯ ಹಾಕಿಕೊಳ್ಳುವವರು ಕೆಲರು. ಅದರ ಲ್ಲಿಯೂ ಮದ್ದಿ ನಶ್ಯ—ನಮ್ಮ ಕಡೆ ಉಂಡೆ ನಶ್ಯವನ್ನು ಮದ್ದಿನಶ್ಯ ಎನ್ನುತ್ತಾರೆ—ಮದ್ದಿ ನಶ್ಯವನ್ನು ಮೂಗಿಗೇರಿಸುವುದರಲ್ಲಿ ಬಹಳ ಹೊತ್ತು ಕಳೆಯಬಹುದು.—ಅಂಗೈಗೆ ಸುಣ್ಣ ಹಚ್ಚುವುದು, ಹಚ್ಚಿದ ಸುಣ್ಣವನ್ನು ಬಾಯಲ್ಲಿ ಊದಿ ನೀರು ಆರಿಸುವುದು, ಹಚ್ಚಿದ್ದು ದಪ್ಪ ವಾಯ್ತೊ ಏನೋ ಎಂದು ನೋಡುವುದು, ನಶ್ಯದ ಡಬ್ಬಿ ತೆಗೆಯು ವುದು; ನಶ್ಯವನ್ನು ಸಣ್ಣದಾಗಿ ಉಂಡೆಕಟ್ಟಿ ಪ್ರಮಾಣನಿರ್ಣಯಮಾಡು ವುದು, ಅದನ್ನು ಅಂಗೈ ಮೇಲೆ ಹಾಕಿಕೊಂಡು ಅದೊಂದು ರೀತಿ ಯಿಂದ ತಿಕ್ಕುವುದು. ಹೀಗೆಲ್ಲ ಒಟ್ಟು, ಮದ್ದಿ ನಶ್ಯದಿಂದ ಕಾಲ ಹನನವನ್ನು ಹೆಚ್ಚಾಗಿ ಮಾಡಬಹುದು. ಆದರೆ ಸಾಧಾರಣವಾಗಿ ಮರಸಿಗೆ ಕೂತಾಗ ನಶ್ಯತಿಕ್ಕುವುದು ಕಡಿಮೆ. ಏಕೆಂದರೆ, ಒಂದು

ವೇಳೆ ಬೇಟೆಗಾರನು ಸುಣ್ಣಹಚ್ಚಿ, ಸಶ್ಯದುಂಡೆ ಕಟ್ಟಿ, ತಿಕ್ಕಲು ಪ್ರಾರಂಭಿಸಿ, ಅರೆದೂರ ಹೋದಾಗಲೇ ಯಾವುದಾದರೊಂದು ಪ್ರಾಣಿಯು ಓಡುತ್ತ ಬಂದುಬಿಟ್ಟರೆ! ಆದ್ದರಿಂದ ಮನೆಯಲ್ಲಿಯೇ ಸಶ್ಯತಿಕ್ಕಿ ಚಿಟಿಕೆ ಕಟ್ಟಿ ತೆಗೆದುಕೊಂಡು ಹೋಗುತ್ತಾರೆ. ಸಶ್ಯ ಎಲೆಯಡಿಕೆಗಳನ್ನು ಮರಸಿಗೆ ಕೂತಾಗ ಉಪಯೋಗಿಸಬಹುದು, ಆದರೆ ಬೀಡಿ ಸಿಗರೇಟು ಮದ್ಯಗಳನ್ನು ಖಂಡಿತ ಉಪಯೋಗಿಸಬಾರದು. ಬೀಡಿ ಸಿಗರೇಟು ಹತ್ತಿಸಿದರೆ ಹೊಗೆಯೆದ್ದು, ಪ್ರಾಣಿಗಳಂತಿರಲಿ, ಸೊಳ್ಳೆಗಳು ಕೂಡ ಸಮೀಪಕ್ಕೆ ಬರುವುದಿಲ್ಲ. ಮದ್ಯಪಾನ ಮಾಡಿದರೆ ಗೊತ್ತೇ ಇದೆ!

ಚೀಲದಿಂದ ಹತ್ತೆಂಟು ಅಡಕೆಗಳನ್ನು ತೆಗೆದು ಹಸನಾದುದನ್ನು ನಿದಾನವಾಗಿ ಆರಿಸಿದನು. ಆಮ್ಮೇಲೆ ಅದನ್ನು ಒಂದು ಸಾರಿ ಪದ್ಧತಿಯಂತೆ 'ಉಫ್' ಎಂದು ಮೆಲ್ಲಗೆ ಊದಿ ಬಾಯಿಗೆ ಎಸೆದುಕೊಂಡನು. ಆದಷ್ಟು ಪ್ರಯತ್ನದಿಂದ ಸದ್ದಾಗದಂತೆ ಅದನ್ನು ಕಡಿಯತೊಡಗಿದನು. ತರುವಾಯ ಎಲೆಗಳನ್ನು ತೆಗೆದು, ಒಂದನ್ನು ಆರಿಸಿ, ಅದನ್ನು ಚೆನ್ನಾಗಿ ಹಿಂಗೈಯಿಂದ ನೀವಿ ಒರಸಿ, ಸಂಪ್ರದಾಯದಂತೆ ಶಿರವನ್ನು ತುಂಡುಮಾಡಿ, ಸುಣ್ಣದ ಡಬ್ಬಿಯಿಂದ ಸುಣ್ಣವನ್ನು ತೆಗೆದು ಬಳಿದು, ನಿದಾನವಾಗಿ ಎಲೆಯನ್ನು ಮಡಿಸಿ ಆಲೆಯಕಣೆಗೆ (ಕಬ್ಬಿನ ಗಾಣಕ್ಕೆ) ಕಬ್ಬನ್ನು ಕೊಡುವಂತೆ ಬಾಯಮೂಲೆಯಿಂದ ಎಲೆಯನ್ನು ಒಳಗೆ ತೂರಿಸಿದನು. ಆಮೇಲೆ ಹೊಗೆ ಸೊಪ್ಪನ್ನು ತೆಗೆದು ಅಂಗೈಮೇಲೆ ಸುಣ್ಣ ಹಚ್ಚಿ ನೀವಲಾರಂಭಿಸಿದನು. ಚೆನ್ನಾಗಿ ನೀವಿ ಅದನ್ನು ಕೈಬೆರಳುಗಳಲ್ಲಿ ಚಿಟಿಕೆ ಹಿಡಿದುಕೊಂಡು ಬಾಯಿಗೆ ಹಾಕಿಕೊಳ್ಳಲೋಸುಗ ತಲೆಯನ್ನು ಮೇಲೆತ್ತಿದನು. ರಂಗಯ್ಯ ಬೆಚ್ಚಿದನು! ಕಣ್ಣು ಕತ್ತಲೆಗಟ್ಟಿದಂತಾಯ್ತು! ಏನನ್ನೋ ಆಲೋಚಿಸುತ್ತ ದಿವಾಸ್ವಪ್ನಸ್ಥನಾದ ಮನುಷ್ಯನ ಮೈಮೇಲೆ ತಕಪಕ ಕುದಿಯುವ ಬಿಸಿನೀರನ್ನು ಹೊಯ್ದಂತಾಯ್ತು! ನೋಡುತ್ತಾನೆ, ತನ್ನೆದುರು ತಾನು ಕುಳಿತ ಪೊದೆಗೆ ಒಂದೂವರೆ ಮಾರು ದೂರದಲ್ಲಿ ಕುಳಿ

ತಿದೆ ಒಂದು ಹುಲಿ! ಹೆಬ್ಬುಲಿ!!

ರಂಗಯ್ಯ ಎಲೆ ಅಡಕೆ ಹಾಕುವ ಸಂಭ್ರಮದಲ್ಲಿ ಬಾಹ್ಯ ಜಗತ್ತನ್ನೇ ಮರೆತು ಬಿಟ್ಟಿದ್ದ. ಆ ಹಾಳು ಹೆಬ್ಬುಲಿ ಕೆಲವು ಅತಿಥಿಗಳಂತೆ ಹೇಳದೆ ಕೇಳದೆ, ಒಂದಿನಿತು ಸದ್ದನ್ನು ಕೂಡ ಮಾಡದೆ, ಅಲ್ಲಿ ಬಂದು ಕುಳಿತಿದ್ದು ತಲ್ಲೀನವಾಗಿದ್ದ ಅವನ ದೃಷ್ಟಿಗೆ ಬೀಳಲೇ ಇಲ್ಲ. ಮೊದಲೇ ಕಣ್ಣಿಗೆ ಬಿದ್ದಿದ್ದರೆ ಅದನ್ನು ದೂರದಿಂದಲೇ ಸುಡುತ್ತಿದ್ದ. ಅವನೇನು ಅಷ್ಟೊಂದು ಅಂಜುಬುರುಕನಲ್ಲ. ಎದೆಗಾರ ಬೇಟೆಗಾರ. ಹಿಂದೆ ಹುಲಿಗಳನ್ನು ಹೊಡೆದಿದ್ದ. ವನವರಾಹಗಳನ್ನು ಅಟ್ಟಿಯಟ್ಟಿ ಸುಟ್ಟು ಕೆಡವಿದ್ದ. ಆದರೆ ಆ ಅನಿಷ್ಟ ಪ್ರಾಣಿಯು ಮೆತ್ತಗೆ ಬಂದು ಹತ್ತಿರ ಕುಳಿತು ಬಿಟ್ಟಿತ್ತು! ಅವನಿಗೆ ಇದ್ದಕ್ಕಿದ್ದ ಹಾಗೆ ಲೋಕಗಳೆಲ್ಲ ಮುಳುಗಿ ಹೋದಂತಾಯಿತು. ಕಣ್ಣು ಕೂಡ ಹೆದರಿ ರೆಪ್ಪೆ ಹಾಕಲಿಲ್ಲ. ತಂಬಾಕನ್ನು ಬಾಯಿಗೆ ತಲಪಿಸುತ್ತಿದ್ದ ಕೈ ಅರ್ಧದಲ್ಲಿಯೇ ನಿಂತು ನಿಷ್ಪಂದವಾಯಿತು. ಬಾಯಿ ಎಲೆಯಡಕೆ ಜಗಿಯುವುದನ್ನು ಹೇಳದೆ ಕೇಳದೆ ನಿಲ್ಲಿಸಿಬಿಟ್ಟಿತು. ಉಸಿರಾಡುವುದು ಮಾತ್ರ ಕಡಿಮೆ ಮಾಡಬೇಕೆಂದು ಅವನು ಯತ್ನಿಸಿದಂತೆಲ್ಲ ಪ್ರಬಲವಾಗತೊಡಗಿತು. ಮೈ ನವಿರು ನಿಮಿರಿ ನಿಂತಿತು. ಮೊದಲು ಕಾಡಿನ ಕುಳಿರ್ಗಾಳಿಯಿಂದ ಚಳಿಯಾಗುತ್ತಿದ್ದ ಅವನಿಗೆ ಈಗ ಸೆಕೆಯಾಗಲಾರಂಭಿಸಿತು. ಹಣೆ ಬೆವರಿ ಹೋಯಿತು. ಅಂಗಿಯ ಒಳಗೆ ನೀರಿನ ಚಿಲುಮೆಗಳು ಉಕ್ಕಿಯುಕ್ಕಿ ಹರಿಯ ತೊಡಗಿದುವು 'ಗೋವಿನ ಕಥೆ' ಯಲ್ಲಿ ಬರುವ "ಬಂದನಾ ಹುಲಿರಾಯನು" ಎಂಬ ಪಂಕ್ತಿಯ ಅರ್ಥವು ಅವನಿಗೆ ಚೆನ್ನಾಗಿ ಸ್ಫುರಿಸಿತೆಂದು ತೋರುತ್ತದೆ.

ಇದೇ ಸಮಯ. ಹುಲಿಗಳ ನಡತೆಯ ವಿಚಾರವಾಗಿ ನಿಮಗೆ ಎರಡು ಮಾತು ಹೇಳಿಬಿಡುತ್ತೇನೆ. ಹುಲಿಗಳ ನಡತೆಯು ನನಗೇನೋ ಅಷ್ಟು ಸಮರ್ಪಕವಾಗಿ ಕಾಣುವುದಿಲ್ಲ "ಬಾಲಬೋಧೆ" ಯಲ್ಲಿ "ಎಲೆ ಬೆಕ್ಕೆ ರೂಪಿನಿಂದಲೆ ಹುಲಿ ಜಾತಿಗೆ ಸೇರ್ದೆನೆಂದು ಗರ್ವಿಸಬೇಡ" ಎಂಬ ಪದ್ಯವನ್ನು ನೀವೆಲ್ಲ ಓದಿರಬೇಕು. ನನಗೇನೊ ಹೀಗೆಂದು

ತೋರುವುದು. ಬೆಕ್ಕು ಹೆಮ್ಮೆ ಪಡುವಷ್ಟು ಶ್ರೇಷ್ಠವಾದುದಲ್ಲ ಹುಲಿಯ ಜಾತಿ. ಸಿಂಹದಂತಹ ದೊಡ್ಡ ದೇಹದ ಹುಲಿಯೊಳಗೆ ಇರುವುದು ಬೆಕ್ಕಿನಂತಹ ಕ್ಷುದ್ರಪ್ರಾಣಿಯ ಹೀನಾತ್ಮ. ವ್ಯಕ್ತಿತ್ವಕ್ಕೆ ತಕ್ಕ ಆತ್ಮಗೌರವ ಬೇಡವೇ! ವೇಷವನ್ನು ನೋಡಿದರೆ ದೊಡ್ಡ ದೊಡ್ಡ ಪಟ್ಟೆನಾಮದ ಪನಾಚಾರ್ಯ! ಆಚಾರವನ್ನು ನೋಡಿದರೆ ಅತಿಹೀನ. ಬರಿಯ ಕುಹಕ, ಠಕ್ಕು, ರೌಳಿ, ಮೋಸ. ಕಳ್ಳರು ಕೂಡ ನಾಚಿಕೆ ಪಟ್ಟುಕೊಳ್ಳುವಂತಹ ಕೀಳು ನಡತೆ. ನನಗೇನೋ ಖಂಡಿತ ಸಮರ್ಪಕವಾಗಿಲ್ಲ ಹುಲಿಗಳ ನಡತೆ. ಹುಟ್ಟಿಸಿದ ದೇವರಿಗೂ ಅವಮಾನಕರವೆಂದೇ ಹೇಳಬಹುದು. ಅವು ಮಲೆನಾಡಿನಲ್ಲಿ ಮಾಡುವ ಕಳ್ಳತನವನ್ನೂ ಮೋಸವನ್ನೂ ಅನ್ಯಾಯವನ್ನೂ ಕುರಿತು ನಿಮಗೆ ನಾನು ಹೇಳಿದರೆ ಆಗ ಗೊತ್ತಾಗುವುದು ನಾನು ಹೇಳುವ ಮಾತು ವೇದವಾಕ್ಯವೆಂದು. ಅವುಗಳನ್ನೆಲ್ಲ ಕುರಿತು ಇನ್ನಾವಾಗಲಾದರೂ ಸಮಯ ದೊರೆತಾಗ ಉಪನ್ಯಾಸ ಮಾಡುವೆನು. ಈಗ ಸದ್ಯಕ್ಕೆ ಅವುಗಳ ಮೆಲ್ಲಡಿಗಳ ವಿಚಾರ ಹೇಳುವೆನು. ಬೇಸಗೆಯಲ್ಲಿ ಕಾಡಿನ ನಡುವೆ ಯಾವ ಪ್ರಾಣಿ ತಿರುಗಾಡಿದರೂ ಸದ್ದಾಗದೆ ಇರುವುದಿಲ್ಲ. ಏಕೆಂದರೆ ಚೆನ್ನಾಗಿ ಒಣಗಿ ಗರಿಗರಿ ಎನ್ನುವ ತರಗೆಲೆಗಳು ಸಾಂದ್ರವಾಗಿ ಬಿದ್ದಿರುವುವು. ಗಾಳಿ ನಡೆದರೂ ಕೂಡ ಸದ್ದಾಗುವುದು. ಹಲ್ಲಿ ಹರಿದರೂ ಕೂಡ ಸದ್ದಾಗುವುದು. ಇನ್ನು ಹಂದಿ, ಕಣೆ ಹಂದಿ, ಮಿಗ, ಬರ್ಕ, ಮುಂಗುಸಿ, ಕಬ್ಬೆಕ್ಕು, ಕಾಡುಕುರಿ, ಸಾರಗ, ಕಾಡು ಕೋಳಿ, ಚಿಪ್ಪಿನ ಹಂದಿ, ಕಾಡು ಕೋಣ ಇವುಗಳು ಬಂದರಂತೂ ಹೇಳುವುದೇನು! ಎರಡು ಫರ್ಲಾಂಗು ದೂರದಿಂದಲೇ ಬೇಟೆಗಾರನಿಗೆ ವರ್ತಮಾನ ಸಿಕ್ಕುವುದು. ಆದರೆ ಈ ಹಾಳು ಹುಲಿಗಳು ಮಾತ್ರ ಒಂದಿನಿತು ಸದ್ದನ್ನೂ ಮಾಡದೆ ಸಂಚರಿಸಬಲ್ಲುವು. ತಮ್ಮ ನಖಗಳನ್ನು ಮೇಲಕ್ಕೆ ಸೇದಿಕೊಂಡು ಅಂಗಾಲನ್ನು ಬೂರುಗದ ಹತ್ತಿಯ ತಲೆದಿಂಬಿನಂತೆ ಮಾಡಿಕೊಂಡು ತರಗೆಲೆಗಳಿಗೆ ಮೆಲ್ಲಗೆ ಮುತ್ತು ಕೊಡುತ್ತ ಸಂಚಾರ ಮಾಡುವುವು. ಇದನ್ನು ನೋಡಿ ತಿಳಿಯದ ಕೆಲವು ಬೇಟೆ

ಗಾರರು ಹುಲಿಗಳು, ದೇವತೆಗಳಂತೆ, ನೆಲದ ಮೇಲೆ ನಡೆಯುವುದೇ ಇಲ್ಲ ಎಂದು ಸಾಧಿಸುತ್ತಾರೆ. ಹುಲಿಯು ತನ್ನ ಮೆತ್ತೆಗಾಲನ್ನು 'ಧಪ್ ಧಪ್' ಎಂದು ನಿದಾನವಾಗಿ ಇಡುತ್ತ ಬಂದಿತೆಂದರೆ ಕೇಳು ವುದಕ್ಕೆ ನೂರು ಕಿವಿಗಳಿದ್ದರೂ ಸಾಲದು. ಹೀಗಿರುವಾಗ ಅನ್ಯಮನ ಸ್ಕರಾಗಿ ಮೇಯುವ ದನ ಕರುಗಳು ಹುಲಿರಾಯನ ಆಗಮನವನ್ನು ತಿಳಿಯುವ ಬಗೆ ಹೇಗೆ? ತತ್ಪರತೆಯಿಂದ ಎಲೆಯಡಕೆ ಹಾಕುತ್ತ ಕುಳಿತ ರಂಗಯ್ಯನಂತಹ ಬೇಟೆಗಾರರು ಅರಣ್ಯಾಚಾರ್ಯನ ಆಗಮನವನ್ನು ಅರಿ ಯುವುದೆಂತು?

ಅಂತೂ ರಂಗಯ್ಯನ ಮುಂದೆ ಹೆಬ್ಬುಲಿ ಕುಳಿತಿತ್ತು. ರಂಗಯ್ಯ ಎಲ್ಲಿ ಹುಲಿಯು ಗಮನ ತನ್ನ ಮೇಲೆ ಬೀಳುವುದೋ ಎಂದು ಹೆದರಿ ಸೆಡೆತುಕೊಂಡು ನೋಡಿದ. ದೊಡ್ಡ ಹೆಬ್ಬುಲಿ. ಅದಕ್ಕೂ ತನಗೂ ಒಂದೇ ಮಾರು! ಅಥವಾ ಒಂದೂವರೆ ಮಾರು! ಮುಂದಿನ ಕಾಲು ಗಳೆರಡನ್ನು ನೆಲದ ಮೇಲೆ ನೇರವಾಗಿ ಊರಿಕೊಂಡು, ನೀಳವಾದ ಬಾಲವನ್ನು ಗಾಳಿಯಲ್ಲಿ ಆಡಿಸುತ್ತ, ಭಯಂಕರವಾದ ಮೀಸೆಗಳನ್ನು ಅತ್ತಿತ್ತ ಕುಣಿಸುತ್ತ, ಮಿಂಚಿನ ಕಣ್ಣುಗಳನ್ನು ಗುಡ್ಡೆಗಳಲ್ಲಿ ಹೊರ ಳಿಸುತ್ತ, ಉಗ್ರಕರಾಳವದನವನ್ನು ಒಂದೊಂದು ಸಾರಿ ಅತ್ತಿತ್ತ ತಿರು ಗಿಸಿ ವನಪ್ರಾಂತವನ್ನು ಧೀರವಾಗಿ ಪರೀಕ್ಷಿಸುತ್ತ ಸರಿಯಾದ ಆಳಿನ ಎದೆಯೆತ್ತರ ಕೂತಿದೆ! ಕೂತಿದೆ!! ನಿಂತರೇನು ಗತಿ?

ಪಾಪ, ಎಂತಹ ಬೇಟೆಗಾರನಾದರೂ ಅಂತಹ ಸನ್ನಿವೇಶದಲ್ಲಿ ಏನು ಮಾಡುತ್ತಾನೆ? ಹುಲಿ ಸ್ವಲ್ಪವಾದರೂ ದೂರವಾಗಿದ್ದರೆ ಸುಡ ಬಹುದು. ಅದರಲ್ಲಿಯೂ ರಂಗಯ್ಯನ ಕೋವಿ ಕೇಪಿನ ಕೋವಿ. ಒಂದೂವರೆ ಮಾರಿಗಿಂತ ಹೆಚ್ಚೇ ಉದ್ದವಿದೆಯೋ ಏನೋ! ಹುಲಿಗೆ ಅವನು ಕೂತದ್ದು ಗೊತ್ತಾದರೆ ಗತಿಯೇನು? ಮುಂದಿನ ಪಾದ ವೊಂದನ್ನು ನಿರ್ಲಕ್ಷ್ಯವಾಗಿ ಬೀಸಿದರೂ ಸಾಕು, ರಂಗಯ್ಯನ ಕರುಳು, ಬಾಲ್ಯದಿಂದಲೂ ಮಮತೆಯಿಂದ ಸಾಕಿ ಸಲಹಿದ ಕರುಳು, ಪೋಲೀ ಸಿನವರ ಯಮ ಪೀಡನೆಗೆ ಸಿಕ್ಕಿದ ಕಳ್ಳನ ಕದ್ದ ಗಂಟಿನಂತೆ ಈಚೆಗೆ ಬರು

ವುದು. ಕರುಳಿನ ಜೊತೆಗೆ ಕುಂಬಳ ಕಾಯಿಯಷ್ಟು ದಪ್ಪವಾಗಿರುವ ಅವನ ಜ್ವರಗಡ್ಡೆಯಂತೂ, ಸಿಂಹಗರ್ಜನೆಗೆ ಬೆದರಿದ ಗರ್ಭಿಣಿ ಜಿಂಕೆಯ ಬಸುರಿನಿಂದ ಅರೆ ಬೆಳೆದ ಭ್ರೂಣವು ಜಗುಳಿ ಬಿದ್ದಂತೆ, ಹೊರಬೀಳು ವುದು. ಕಾಸೂ ಖರ್ಚಿಲ್ಲದೆ ಶಸ್ತ್ರ ಚಿಕಿತ್ಸೆಯಾಗುವುದು. ಅದರಲ್ಲಿ ಯೂ ಹೆಬ್ಬುಲಿಯೊಡನೆ ಇತರ ಪ್ರಾಣಿಗಳ ಮೇಲೆ ಕೆಚ್ಚು ತೋರಿಸು ವಂತೆ ತೋರಿಸಲಾಗುವುದಿಲ್ಲ. ರಂಗಯ್ಯ ವ್ಯಾಘ್ರನಖಾಘಾತದಿಂದ ಆದ ಅನಾಹುತಗಳನ್ನು ಹಿಂದೆ ಕಂಡು ಕೇಳಿದ್ದ. ಒಂದು ಉಗುರೇ ಸಾಕು ಮನುಷ್ಯನ ಎದೆ ಹೊಟ್ಟೆಗಳನ್ನು ಸೀಳುವುದಕ್ಕೆ. ಅದಕ್ಕೆ ಇಪ್ಪತ್ತು ಉಗುರುಗಳಿವೆ. ಅವುಗಳ ಸಹಾಯಕ್ಕೆ ಆ ಹಾಳು ಕರಾಳದಂಷ್ಟ್ರ ಗಳು ಬೇರೆ! ಹೆದರಿಕೆಯನ್ನು ಇನ್ನೂ ಹೆಚ್ಚು ಮಾಡಲು ಆ ಭಯಾನಕ ವಾದ ಬಣ್ಣ ಬಣ್ಣದ ವೇಷ ಬೇರೆ! ಹೆಸರು ನೋಡಿದರೆ "ಹುಲಿ!" ಎಷ್ಟು ಅಸಮಂಜಸ! ಅಷ್ಟು ದೊಡ್ಡ ಭಯಂಕರವಾದ ಪ್ರಾಣಿಗೆ ಕನ್ನಡದಲ್ಲಿ ಎಷ್ಟು ನಯವಾದ ಪುಟ್ಟ ಹೆಸರು! ಸಂಸ್ಕೃತದ ಹೆಸರೇ ಸರಿಯಾಗಿದೆ. "ವ್ಯಾಘ್ರ!" ಶಬ್ದವು ಕೇಳುವುದಕ್ಕೂ ನೋಡುವು ದಕ್ಕೂ ಪ್ರಾಣಿಯಂತೆಯೇ ಕರ್ಕಶಭಯಾನಕವಾಗಿದೆ.

ರಂಗಯ್ಯನ ಬಳಿ ಇದ್ದದ್ದು ಬಂಟಿನಳಿಗೆ ಕೇಪಿನ ಕೋವಿ. ಕೇಪಿನ ಕೋವಿಯೇ ಫಜೀತಿ! ಒಂದು ಈಡು ಹೊಡದರ ಮತ್ತೊಂದು ಈಡು ತುಂಬಬೇಕಾದರೆ ಐದು ನಿಮಿಷವಾದರೂ ಬೇಕೇ ಬೇಕು. ತೋಟಾ ಕೋವಿಯಾದರೋ ಸಿದ್ಧವಾಗಿರುವ ತೋಟಾಗಳು ಜೇಬಿ ನಲ್ಲಿ ಇರುವುವು. ತೋಟಾ ತುಂಬುವುದೊಂದೇ ತಡ, ಎಷ್ಟು ಗುಂಡುಗಳನ್ನು ಬೇಕಾದರೂ ಸಿಡಿಯಬಹುದು. ಅದರಲ್ಲಿಯೂ ಒಂದು ನಳಿಗೆ ಕೇಪಿನ ಕೋವಿ! ಜೋಡುನಳಿಗೆಯಾಗಿದ್ದರೆ ಎರಡು ಈಡುಗಳನ್ನಾದರೂ ಹಾರಿಸಬಹುದು! ಒಂದು ತಪ್ಪಿದರೆ ಮತ್ತೊಂದು! ಅಥವಾ ಒಂದು ಗುಂಡಿಗೆ ಅರೆಪೆಟ್ಟಾದರೆ ಮತ್ತೊಂದು ಗುಂಡು ಹೊಡೆದು ಕೊಲ್ಲಬಹುದು. ಅಲ್ಲದೆ ಹುಲಿಯನ್ನು ಅಷ್ಟು ಸಮೀಪ ಹೊಡೆಯುವುದು ಕ್ಷೇಮಕರವಲ್ಲ. ನೀವು ಯಾರಾದರೂ ರಂಗಯ್ಯ

ಹೇಡಿ ಎಂದು ಹೇಳಿದರೆ ನನಗೆ ಕೋಪ ಬರುತ್ತದೆ. ನಾನು ಬಲ್ಲೆ ಅದರ ಸುಖಾಸುಖಗಳನ್ನು. ಅಂತಹ ಸಮಯದಲ್ಲಿ ಭಗವದ್ಗೀತೆಯ "ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ" ಎಂಬ ಶ್ಲೋಕವನ್ನು ಎಷ್ಟುಸಾರಿ ಹೇಳಿಕೊಂಡರೂ ಪ್ರಯೋಜನವಿಲ್ಲ. ರಂಗಯ್ಯನ ಮುಂದಿದ್ದುದು ಊಹನೆಯ ಶಸ್ತ್ರಗಳಲ್ಲ, ತತ್ವಶಾಸ್ತ್ರದ ಪಾವಕನಲ್ಲ. ಅರಣ್ಯದ ಶನಿಯಾದ ವ್ಯಾಘ್ರದ ಸಾಕ್ಷಾತ್ ನಖಗಳು! ಗೀತೆಯು "ನೈನಂ ಛಿಂದಂತಿ" ಎಂದು ಹೇಳಿದ್ದರೂ ಕೂಡ ರಂಗಯ್ಯನಿಗೆ ಗೊತ್ತು ಅದು ಸುಳ್ಳು ಎಂದು. ವ್ಯಾಘ್ರವು ತನ್ನ ಕ್ರೂರ ನಖಾನ್ವಿತ ಪಾದಗಳನ್ನು ಬೀಸಿದ್ದರೆ ಸಾಕು, ಭಗವದ್ಗೀತೆಯೆಲ್ಲಾ ಹರಿದು ಹರಿದು ಚೂರು ಚೂರಾಗಿ ಕರುಳು, ರಕ್ತ, ಜ್ವರಗಡ್ಡೆ, ಹೃದಯ, ಶ್ವಾಸಕೋಶ, ಆರೋಗ್ಯಶಾಸ್ತ್ರ, ಶಿವ ಮಾಡಿದ ಸೃಷ್ಟಿ ಎಲ್ಲವೂ ಸ್ವಲ್ಪವೂ ದಾಕ್ಷಿಣ್ಯವಿಲ್ಲದೆ ಹೊರಗೆ ಹಾರುತ್ತಿದ್ದುವು! ಆದ್ದರಿಂದ ರಂಗಯ್ಯ ಎಷ್ಟು ಎದೆ ಗಟ್ಟಿ ಮಾಡಿಕೊಂಡರೂ ದೇಹವು ಮೆಲ್ಲಗೆ ಕಂಪಿಸಲು ಪ್ರಾರಂಭವಾಯಿತು. ಅದರಲ್ಲಿಯೂ ಹುಲಿಯು ಒಂದು ಸಾರಿ ಆಕಳಿಸಿ, ಕಣ್ಣು ಮೀಸೆಗಳನ್ನು ತಿರುಗಿಸಿ, ಭುಜಪ್ರದೇಶವನ್ನು ನೆಕ್ಕಿಕೊಂಡಿತು. ಆಗ ಅದರ ಪಾಳ್ಮೊಗದ ಗುಟ್ಟು ರಂಗಯ್ಯನಿಗೆ ಸ್ವಲ್ಪ ಗೊತ್ತಾಯಿತು. ಏನು ದಂತಪಂಕ್ತಿಗಳು! ಎಂತಹ ನಾಲಗೆ! ಎಷ್ಟು ಉದ್ದ ಆ ಕೋರೆದಾಡೆಗಳು! ಯಶೋದೆಯು ಕೃಷ್ಣನ ಬಾಯಲ್ಲಿ ಬ್ರಹ್ಮಾಂಡಗಳನ್ನು ಕಂಡು ಭಯಗೊಂಡುದು ಸುಳ್ಳೋ ನಿಜವೋ ನನಗೆ ಗೊತ್ತಿಲ್ಲ. ರಂಗಯ್ಯನಂತೂ ಹುಲಿಯ ಬಾಯೊಳಗೆ ಪಾತಾಳ, ನರಕ, ಮೃತ್ಯು ಎಲ್ಲವನ್ನೂ ಒಂದೇ ತಡವೆ ಕಂಡು ನಡುಗತೊಡಗಿದನು. ನಡುಕ ಹೆಚ್ಚಿತು ನಡುಗಿದರೆ ಎಲ್ಲಿ ಹುಲಿಗೆ ತಾನಡಗಿರುವುದು ಗೊತ್ತಾಗುವುದೋ ಏನೋ ಎಂದು ನಡುಕವನ್ನು ತಡೆಯಲು ಬಹಳ ಪ್ರಯತ್ನಪಟ್ಟನು. ಸ್ಪಂದನವು ಇನ್ನೂ ಹೆಚ್ಚಾಗಿ ಹೋಯಿತು. ಅರಳಿಯ ಎಲೆಗಳು ಗಾಳಿಗೆ ಕಂಪಿಸುವಂತೆ ಅವನ ದೇಹ ಸಮಸ್ತವೂ ಗಡಗಡನಡುಗತೊಡಗಿತು. ಮಿದುಳಿನಲ್ಲಿ ವಿಪ್ಲವಕ್ಕಾರಂಭವಾ

ಯಿತು. ಕಣ್ಣು ಕಿವಿಯಾಯಿತು, ಕಿವಿ ಕಣ್ಣಾಯಿತು, ಮೂಗು ಬಾಯಿಯಾಗಿ, ಬಾಯಿ ಮೂಗಾಗಿ, ಕೂದಲು ತಲೆಯೊಳಗೆ ಇಳಿಯ ತೊಡಗಿದವು ಹೆದರಿಕೆಯಿಂದ! ತಲೆಯ ಕೂದಲೆ ಹೆದರಿ ಬುರುಡೆ ಯೊಳಗೆ ಹುದುಗಹೊರಟರೆ ರಂಗಯ್ಯ ಏನು ಮಾಡಿಯಾನು? ಇಷ್ಟ ರಲ್ಲಿ ಉಸಿರು ಮೂಗು ಬಾಯಿಗಳಲ್ಲಿ ತಿದಿಯೊತ್ತುತ್ತಿತ್ತು. ಇಷ್ಟಾ ದರೂ ನಾನು ರಂಗಯ್ಯ ಎದೆಗಾರನೆಂದೇ ಸಾರಿ ಸಾರಿ ಹೇಳುತ್ತೇನೆ. ಏಕೆಂದರೆ ನಾವು ಯಾರಾದರೂ ಆಗಿದ್ದರ, ಸತ್ತು ಆಗಲೇ ಶತಮಾನ ವಾಗಿರುತ್ತಿತ್ತು!

ರಂಗಯ್ಯ ಜೀವದ ಮೇಲೆ ಆಸೆ ಬಿಟ್ಟನು. ನೆಲದ ಮೇಲಿದ್ದ ಕೋವಿಯನ್ನು ಎತ್ತಿಕೊಳ್ಳುವುದಕ್ಕೂ ಅವನಿಗೆ ಚೈತನ್ಯವಿರಲಿಲ್ಲ. ವ್ಯಾಘ್ರವೇನೋ ಆಕಳಿಸುತ್ತ ಮೈ ನೆಕ್ಕಿಕೊಳ್ಳುತ್ತ ಸಿದ್ಧಾರ್ಕ್ಷಿಣ್ಯ ವಾಗಿ ಕುಳಿತಿತ್ತು. ರಂಗಯ್ಯ ಹರಿಕಥೆಗಳಲ್ಲಿ ಕೇಳಿದ್ದನು, ಸಾಯುವ ಹೊತ್ತು ಬಾರದೆ ಯಾರೂ ಸಾಯುವುದಿಲ್ಲ ಎಂದು. ಹುಲಿಯು ಆ ಹೊತ್ತನ್ನೇ ಕಾಯುತ್ತಿದೆ ಎಂದು ನಿರ್ಧರಿಸಿದನು. ಅಂತೂ, ನಾನು ಸಾಯುತ್ತೇನೆ! ಈಗಲೋ ಆಗಲೋ ಅಷ್ಟೆ! ಸಾಯುವುದೇನೋ ನಿಶ್ಚಯ! ಹೀಗೆಂದು ಚಿಂತಿಸುತ್ತಿದ್ದ ಹಾಗೆಯೇ ಕಣ್ಣು ಹನಿಗಣ್ಣಾ ಯಿತು. ಎರಡು ಅಶ್ರುಗಳು ಕೆನ್ನೆಯ ಮೇಲುರುಳಿ ತೊಡೆಯ ಮೇ ಲಿದ್ದ ಕಂಬಳಿಯ ಮೇಲೆ ಬಿದ್ದು ಬತ್ತಿ ಹೋದುವು. ಹುಲಿರಾಯನು ಆಗ ಅವನನ್ನು ನೋಡಿದ್ದರೆ ಮರುಕದಿಂದ ತೊಲಗುತ್ತಿದ್ದನೆಂದು ತೋರುತ್ತದೆ. ಆದರೆ ಆ ಮಹಾನುಭಾವನ ಧೀರ ಪ್ರಶಾಂತ ದೃಷ್ಟಿಗೆ ಈ ಬಡಪಾಯಿಯ ಗೋಳು ಬೀಳಲೇ ಇಲ್ಲ. ನಸುಗಪ್ಪು ಬಾನಿನಿಂದಿ ಳಿಯುತ್ತಿತ್ತು.

ರಂಗಯ್ಯ ಹೆಂಡಿರು ಮಕ್ಕಳನ್ನು ನೆನೆದನು. ಆಸ್ತಿಪಾಸ್ತಿ ಗಳನ್ನು ನೆನೆದನು. ನಂಟರಿಷ್ಟರನ್ನು ನೆನೆದನು. ಮನೆ ಮಾರು ಗಳನ್ನು ನೆನೆದನು. ಕಣ್ಣೀರು ಧಾರೆ ಧಾರೆಯಾಗಿ ಹರಿದು ನನೆದು ಹೋದನು. ತಾನು ಬೆಳೆದಿದ್ದ ತರಕಾರಿಯ ತೋಟ, ಬೆಳೆದು ನಿಂತ

ಗದ್ದೆಗಳು, ಸಾಕಿ ಸಲಹಿದ ದನಕರುಗಳು, ವೊನ್ನೆತಾನೇ ಸಾಲ ಮಾಡಿ ಕೊಂಡುಕೊಂಡಿದ್ದ ಅಡಿಕೆ ತೋಟ ಎಲ್ಲವೂ ಚಿತ್ರಭಿತ್ತಿಯಲ್ಲಿ ಚಲನಚಿತ್ರಗಳಂತೆ ಮಿಂಚಿದುವು. ಇಷ್ಟರಲ್ಲಿ ಹುಲಿಯು ಒಂದು ಸಾರಿ ಮೆಲ್ಲನೆ ಗರ್ಜಿಸಿತು. ರಂಗಯ್ಯನು ತನಗೆ ಸಾಯುವ ಹೊತ್ತು ಬಂತೆಂದು ತಿಳಿದನು. ಹುಲಿಯು ಮೈ ಮೇಲೆ ಹಾರುವುದಕ್ಕೆ ಪೀಠಿಕಾ ಪ್ರಾಯವಾಗಿ "ಮರಣಕ್ಕೆ ಸಿದ್ಧನಾಗು" ಎಂದು ಎಚ್ಚರಿಕೆ ಹೇಳಲು ಗರ್ಜಿಸಿತೆಂದು ತಿಳಿದುಕೊಂಡನು. ಗರ್ಜನೆಯು ಮೌನವಾಗುತ್ತಿದ್ದ ಕಾಡಿನಲ್ಲಿ ಧುಮುಕಿ ಅನುರಣನವಾಗಿ ದೂರದಲ್ಲಿ ಮುಳುಗಿ ಹೋಯಿತು. ಇರುಳಿನ ಕರಿನೆರಳುಗಳು ಹಿಂಡು ಹಿಂಡಾಗಿ, ಮುಂದೆ ಮುಂದೆಯಾಗಿ ಒಂದರ ಮೇಲೊಂದು ಇಳಿದು ಅಡವಿಯನ್ನು ಮುತ್ತ ತೊಡಗಿದವು ವ್ಯಾಘ್ರದೇಹವು ಮಬ್ಬು ಮಬ್ಬಾಗುತ್ತ ಬಂದ ಹಾಗೆಲ್ಲ ಅದರ ಅಗ್ನಿತುಲ್ಯ ನೇತ್ರಗಳು ಕೆಂಗೆಂಡಗಳಾಗುತ್ತ ಬಂದುವು ರಂಗಯ್ಯ ನಡ ನಡ ನಡುಗುತ್ತಿದ್ದನು ಬೆವರು ಎಡೆಬಿಡದೆ ಸುರಿಯುತ್ತಿತ್ತು ಜಾಯಲ್ಲಿದ್ದ ಎಲೆಯಡಕೆಯು ಸದ್ದು ಮಾಡದೆ ಸ್ವಲ್ಪವೂ ಚಲಿಸದೆ ಹೆದರಿ ಹೆದರಿ ದವಡೆಮೂಲೆಯನ್ನು ಸೇರಿತ್ತು. ರಂಗಯ್ಯ ತನ್ನ ತೋಟದಾಚೆಯ ಭೂತವನ್ನು ನೆನೆದು ಬೇಡಿಕೊಂಡನು. ಬೇಟೆ ದೇವರಿಗೆ ಹಣ್ಣುಕಾಯಿ ಕೊಡುವೆನೆಂದು ಹೇಳಿಕೊಂಡನು. ಪಂಜರಳ್ಳಿಗೆ ಪೂಜೆ ಮಾಡಿ ಕೋಳಿಬಲಿ ಕೊಡುವೆನೆಂದು ಹರಕೆಯೊತ್ತನು. ಜಕಿಣಿಗೆ ಹೆಚ್ಚಾಗಿ ಎಡೆಯಿಕ್ಕುವಂತೆ ಪ್ರಲೋಭನಗೊಳಿಸಿದನು. ಇಂತು ದ್ರಾವಿಡ ದೆವ್ವಗಳೆಲ್ಲ ಪೂರೈಸಿದ ಮೇಲೆ ಆರ್ಯದೇವತೆಗಳಿಗೆ ಹರಕೆಹೊತ್ತನು. ಮನೆದೇವರಾದ ತಿರುಪತಿ ವೆಂಕಟರಮಣನನ್ನು ಸಂಕಟಕಾಲದಲ್ಲಿ ಪ್ರಾರ್ಥಿಸಿದನು. ಧರ್ಮಸ್ಥಳಕ್ಕೆ ತನ್ನಷ್ಟುದ್ದ ಚಿನ್ನದ ತಂತಿ ಮಾಡಿಸಿಕೊಡುವಂತೆ ಪ್ರತಿಜ್ಞೆಮಾಡಿದನು. ಅವನ ಅಲ್ಪ ಬುದ್ಧಿಗೆ ತಿಳಿದ ದೇವತೆಗಳನ್ನೆಲ್ಲಾ ಅಂಗಲಾಚಿ ಬೇಡಿಕೊಂಡನು. ಆದರೂ ಹುಲಿರಾಯನು ಇಟ್ಟ ಹೆಜ್ಜೆಯನ್ನು ಕೀಳಲಿಲ್ಲ.

ಕಡೆಯಲ್ಲಿ, ಹುಲಿಗಳು ಮನುಷ್ಯರ ಸದ್ದನ್ನು ಕೇಳಿದರೆ ಓಡಿ

ಹೋಗುವುವು ಎಂಬುದನ್ನು ತಿಳಿದಿದ್ದ ಅವನು ಏನಾದರೂ ಸದ್ದು ಮಾಡಲು ಧೈರ್ಯಮಾಡಿದನು. ಮೆಲ್ಲಗೆ ಕೆಮ್ಮಿದನು. ಹುಲಿಗೆ ಕೇಳಿಸಿದಂತೆ ತೋರಲಿಲ್ಲ. ಸ್ವಲ್ಪ ಗಟ್ಟಿಯಾಗಿ ಕೆಮ್ಮಿದನು. ಅದೂ ಕೂಡ ಹುಲಿಗೆ ಕೇಳಿಸಿದಂತೆ ತೋರಲಿಲ್ಲ. ಅದರ ಕಿವಿ ಸ್ವಲ್ಪ ಮಂದವಾಗಿರಬಹುದೆಂದು ತಿಳಿದು ಮೆಲ್ಲಗೆ "ಹೋ!" ಎಂದು ಕೂಗಿದನು. ಅದೂ ಕೇಳಿಸಲಿಲ್ಲ. ಆಮೇಲೆ ಇನ್ನು ಸ್ವಲ್ಪ ಗಟ್ಟಿಯಾಗಿ ದೂರದಲ್ಲಿರುವ ಯಾರನ್ನೋ ಕರೆಯುವಂತೆ "ಹೋ!!" ಎಂದು ಕೂಗಿದನು. ಅದೂ ಹುಲಿಗೆ ಕೇಳಿಸಿದಂತೆ ತೋರಲಿಲ್ಲ. ಹಾಳು ಪ್ರಾಣಿ ಕಿವುಡೋ ಏನೋ! ಕಿವುಡಾಗಿರಬಹುದು! ಯಾಕಾಗಬಾರದು? ಹುಲಿಗೆ ವಾಸನೆಯೇನೋ ಇತರ ಕಾಡು ಪ್ರಾಣಿಗಳಿಗೆ ಸಿಕ್ಕಿದಂತೆ ಸಿಗುವುದಿಲ್ಲ ಎಂದು ಹೇಳುತ್ತಾರೆ. ಇರಬಹುದು. ಆದರೆ ಕಿವಿಗೇನು ಕೇಡು? ಇಷ್ಟಾದ ಮೇಲೆ ರಂಗಯ್ಯನ ಎದೆಯಲ್ಲಿ ನಿರಾಶೆಯಿಂದ ನಿರ್ಲಕ್ಷ್ಯತೆ ಹುಟ್ಟಿತು; ನಿರ್ಲಕ್ಷ್ಯತೆಯಿಂದ ಮೊಂಡ ಕೆಚ್ಚು ಜನಿಸಿತು ಆದುದಾಗಲಿ ಎಂದು ಆಲೋಚಿಸಿ ಗಟ್ಟಿಯಾಗಿ "ಹೋ!!" ಎಂದು ಕೂಗಿಕೊಳ್ಳಲಾರಂಭಿಸಿದನು. ಅವನ ಕೂಗು ಕಾಡಿನಲ್ಲೆಲ್ಲ ತೊಳಲಿ ತೊಳಲಿ ಕತ್ತಲೆಯಲ್ಲಿ ಸುಗ್ಗಿ ಸುಗ್ಗಿ ಬೆಟ್ಟದ ತಪ್ಪಲಿನ ಕಣಿವೆಯಲ್ಲಿದ್ದ ಅವನ ಮನೆಗೂ ಮುಟ್ಟಿತು. ಆದರೆ ಮಹಾನುಭಾವ ಹುಲಿರಾಯನ ಕಿವಿಗೆ ಮುಟ್ಟಿದಂತೆ ತೋರಲಿಲ್ಲ. ಅಂತೂ ಹುಲಿಯು ರಂಗಯ್ಯನ ಕಡೆಗೆ ತಿರುಗಿ ಕುಳಿತುಕೊಂಡಿತು ಎಂಬುದು ಅದರ ತಳತಳಿಸುವ ಕಣ್ಣುಗಳಿಂದ ಗೊತ್ತಾಯಿತು. ಆದರೂ ಅದು ತಾನಿದ್ದ ಸ್ಥಳದಿಂದ ಕದಲಿಲ್ಲ. ರಂಗಯ್ಯನ ಮೇಲೂ ಬೀಳಲಿಲ್ಲ.

ಕಾಡು ಪ್ರಾಣಿಗಳು ಸುಮ್ಮಸುಮ್ಮನೆ ಮನುಷ್ಯರ ಮೇಲೆ ಬೀಳುವುದಿಲ್ಲ. ಹುಲಿಯು ಬಹುಶಃ ಆಗತಾನೇ ಭೋಜನವನ್ನು ಪೂರೈಸಿತ್ತೆಂದು ತೋರುತ್ತದೆ; ಸುಮ್ಮನೆ ವಾಯುವಿಹಾರಕ್ಕೆ ಹೊರಟಿದ್ದಿರಬಹುದು. ಆದ್ದರಿಂದ ಬಡಪಾಯಿ ರಂಗಯ್ಯನ ಕಡೆ ನೋಡುತ್ತ ಆಶ್ಚರ್ಯಪಡುತ್ತ ಕುಳಿತುಕೊಂಡಿತ್ತೇ ಹೊರತು ಸಿಟ್ಟಿಗೇಳಲಿಲ್ಲ

ಅದಕ್ಕೆ ಪ್ರಹಸನ, ಇವನಿಗೆ ಪ್ರಾಣಸಂಕಟ!

ರಂಗಯ್ಯನ ಕೂಗು ಮಾಲೆಮಾಲೆಯಾಗಿ ಅವನ ಮನೆಗೆ ಮುಟ್ಟಿತು. ಮಲೆನಾಡಿನಲ್ಲಿ ಮನೆಯಿಂದ ಹೊರಟು ಮಧ್ಯಕಾಡಿಗೆ ಹೋದರೂ ಕಾಡು ಬೆಟ್ಟಗಳು ಇಳಿಜಾರಾಗಿರುವುದರಿಂದ ಮನೆಯಿಂದ ಅಲ್ಲಿಗೆ ನೇರ ದೂರವು ಕಡಿಮೆಯಾಗಿರುತ್ತದೆ. ಅದರಲ್ಲಿಯೂ ಇರುಳಾದ ಮೇಲೆ ಭಯಂಕರ ನಿಃಶಬ್ದವು ಗಗನದಿಂದಿಳಿತಂದು ಭೂಮಿಯ ಮೇಲೆ ಹಕ್ಕಿಯು ಮೊಟ್ಟೆಯನ್ನು ಅಪ್ಪಿ ಕಾವು ಕೂರುವಂತೆ ಕೂರುವುದರಿಂದ ಕಾಡಿನಲ್ಲಿ ಗಟ್ಟಿಯಾಗಿ ಮಾತಾಡಿದರೆ ಮನೆಗೆ ಕೇಳಿಸುವುದು. ಅಂತೂ ರಂಗಯ್ಯನ ಕೂಗು ಕೇಳಿ ಅವನ ತಮ್ಮ ಸಿದ್ದಣ್ಣನು, ಅಣ್ಣನು ಏನೋ ದೊಡ್ಡ ಪ್ರಾಣಿಯನ್ನು ಹೊಡೆದು ಕೊಂದು ಹೊರಲಾರದೆ ತನ್ನನ್ನು ಕರೆಯುವನೆಂದು ಬಗೆದು ಒಂದು ಬಂದೂಕನ್ನು ಕೈಲಿ ಹಿಡಿದುಕೊಂಡು ಕೂಗಿಗೆ ಉತ್ತರವಾಗಿ ಕೂಗುತ್ತ ಹೊರಟು ಬಂದನು. ರಂಗಯ್ಯನಿಗೆ ಸ್ವಲ್ಪ ಧೈರ್ಯವಾಗಿ ಇನ್ನೂ ಗಟ್ಟಿಯಾಗಿ ಕೂಗಿದನು. ವ್ಯಾಘ್ರವು ವಿಚಿತ್ರ ಪ್ರಾಣಿಯ ವಿಚಿತ್ರ ಸ್ವರಮಾಲೆಗಳನ್ನು ಆಲೈಸುತ್ತ ಆಶ್ಚರ್ಯಪಡುತ್ತಿತ್ತು. ಈ ವಿಷಯ ಸಿದ್ದಣ್ಣನಿಗೆ ಗೊತ್ತಾಗಿದ್ದರೆ ಅವನು ಅಷ್ಟು ಕೆಚ್ಚಿನಿಂದ ಕೂಗುತ್ತ ಬರುತ್ತಿರಲಿಲ್ಲ. ಸಿದ್ದಣ್ಣನು ಕೂಗುತ್ತ ಕೂಗುತ್ತ ಹತ್ತಿರ ಬರಲು ಹುಲಿರಾಯನು ನಾಟಕರಂಗದಿಂದ ಚಿಮ್ಮಿ ಕಣ್ಮರೆಯಾದನು. ರಂಗಯ್ಯನ ಆಗಿನ ಸ್ಥಿತಿಯನ್ನು ನೀವೇ ಊಹಿಸಿಕೊಳ್ಳಿ. ಅವನು ಯಾವ ದೇವರಿಗೂ ಹರಕೆ ಒಪ್ಪಿಸಲಿಲ್ಲ. ಏಕೆಂದರೆ, ಯಾವ ದೇವರ ಕೃಪೆಯಿಂದ ಅವನು ಬದುಕಿದನೆಂದು ಯಾರು ತಾನೇ ತೀರ್ಮಾನಮಾಡುವರು? ಅಲ್ಲಿಗೆ ಬಂದ ಸಿದ್ದಣ್ಣನು ನಿಜವನ್ನು ಕೇಳಿ ತಿಳಿದು ಮರವಟ್ಟು ಹೋಗಿದ್ದ ಅಣ್ಣನನ್ನು ಕೈಹಿಡಿದು ಎತ್ತಿ ನಿಲ್ಲಿಸಿದನು. ರಂಗಯ್ಯ ಕೈಯಲ್ಲಿ ಹಿಡಿದಿದ್ದ ತಂಬಾಕಿನ ಚಿಟಿಕೆಯನ್ನು ಬಾಯಿಗೆ ಹಾಕಿಕೊಂಡು ಎಲೆಯಡಿಕೆ ಜಗಿಯಲು ಪ್ರಾರಂಭಿಸಿದನು.

ಈ ಸಂಗತಿ ನಾನೇ ಅವನ ಬಾಯಿಂದ ಕೇಳಿ ತಿಳಿದುಕೊಂಡದ್ದು.

ಅವನ ಶೈಲಿ, ಅವನ ಭಾಷೆ, ಅವನ ಚಮತ್ಕಾರ, ಅವನ ವರ್ಣನಾ ಶಕ್ತಿ ನನಗಿಲ್ಲ. ನಿರ್ಜೀವಲೇಖನಿಯು ಸಜೀವ ಜಿಹ್ವೆಯ ಕಾರ್ಯವನ್ನು ಸಮರ್ಪಕವಾಗಿ ಮಾಡಬಲ್ಲುದೇ? ಅಂತೂ ರಂಗಯ್ಯನು ಅಂದಿನಿಂದ ಮರುಸುಬೇಟೆಗೆ ಹೋಗುವುದನ್ನು ಸಂಪೂರ್ಣವಾಗಿ ಬಿಟ್ಟಿದ್ದಾನೆ. ನೀವು ಯಾವಾಗಲಾದರೂ ಮಲೆನಾಡಿನಲ್ಲಿ ನಮ್ಮೂರ ಕಡೆಗೆ ಹೋದರೆ ಈ ಕತೆಯನ್ನು ಅವನ ಬಾಯಿಂದಲೇ ಕೇಳಿನೋಡಿ.

---

# ಪುಟ್ಟಾಚಾರಿಯ ಕಾಡುಕೋಳಿ

ಪುಟ್ಟಾಚಾರಿಯನ್ನು ನಾನು ನೋಡಿದ್ದೆ. ಎಷ್ಟೋ ಸಾರಿ ಅವನೊಡನೆ ಹರಟೆ ಹೊಡೆದಿದ್ದೆ. ಚಿಕ್ಕವನಾಗಿದ್ದ ನನಗೆ ಅವನ ಹರಟೆಗಳು ರಾಮಾಯಣ ಮಹಾಭಾರತಗಳಂತೆಯೇ ಮನೋಹರವಾಗಿದ್ದುವು. ಅವನ ಹರಟೆ ಎಂದರೆ ಕಾಡು ಹರಟೆಗಳಲ್ಲ, ಕಾಡಿನ ಹರಟೆಗಳು. ನಮ್ಮೂರಿನಲ್ಲಿ ಅವನೊಬ್ಬ ದೊಡ್ಡ ಬೇಟೆಗಾರನಾಗಿದ್ದ. ಅವನದು ನುರಿತ ಕೈ. ಇಟ್ಟ ಗುರಿ ತಪ್ಪುತ್ತಿರಲಿಲ್ಲ. ಪ್ರಾಣಿಯು ಎಷ್ಟು ವೇಗವಾಗಿ ಹಳುವಿನ ನಡುನಡುವೆ ಮಿಂಚಿ ಬಂದರೂ ಪುಟ್ಟಾಚಾರಿಯ ಕಂಡಿಯು ಅದರ ಭಾಗಕ್ಕೆ ಸಾವಿನೂರಿಗೆ ಹೆಬ್ಬಾಗಿಲಾಗಿಯೇ ಬಿಡುತ್ತಿತ್ತು. ಪುಟ್ಟಾಚಾರಿಯ ಈಡು ಎಂದರೆ ಎಲ್ಲರಿಗೂ ಭರವಸೆ. ಒಂದು ವೇಳೆ ಅವನು ಹುಸಿಯಿಡು ಹೊಡೆದರೂ ಅವನನ್ನು ಯಾರೂ ಅಸಡ್ಡೆ ಮಾಡುತ್ತಿರಲಿಲ್ಲ. "ಪ್ರಾಣಿಯ ಸುಕೃತ ಚೆನ್ನಾಗಿತ್ತು" ಎಂದು ಹೇಳಿ, ಗುಂಡು ತಪ್ಪಿದ್ದಕ್ಕೆ ಆಶ್ಚರ್ಯಪಡುತ್ತಿದ್ದರೇ ಹೊರತು ಅವನನ್ನು ದೂರುತ್ತಿರಲಿಲ್ಲ.

ನನಗಿನ್ನೂ ತೆಳ್ಳಗೆ ನೀಳವಾಗಿದ್ದ ಅವನ ಆಕೃತಿಯು ಕಣ್ಣಿಗೆ ಕಟ್ಟಿದಂತಿದೆ. ಆ ಜಿಡ್ಡುಜಿಡ್ಡಾಗಿರುತ್ತಿದ್ದ ಅವನ ಹಾಸನದ ಟೋಪಿ, ಕೊಳೆಯಿಂದ ಹೊಳೆಯುತ್ತಿದ್ದ, ನೀರು ಬಿದ್ದರೆ ಹೀರದೆ ಸಿಡಿಯುತ್ತಿದ್ದ ಅವನ ಹರುಕಲು ಅಂಗಿ, ಯಾವಾಗಲೂ ಮೊಳಕಾಲಿನ ಮೇಗಡೆ ಇರುತ್ತಿದ್ದ ಅವನ ಸೊಂಟದ ಪಂಚೆ, ಎಡಭುಜದಿಂದ ಬಲಪಕ್ಕೆಯ ಮೇಲೆ ನೇತಾಡುತ್ತಿದ್ದ ಅವನ ಕೋವಿಯ ಚೀಲ, ನಡೆದಾಗ ಅದರೊಳಗೆ ಕಣಿಕಣಿಗುಟ್ಟುತ್ತಿದ್ದ ಈಡಿನ ಸಾಮಾನುಗಳು; ಮಾತಾಡಿದರೆ ಹೊರಹೊರಡುತ್ತಿದ್ದ ಕವರ್ಗಪಂಚಮಾಕ್ಷರದ ಧ್ವನಿ; ಆ ಹಳೆಯ ಟೊಪ್ಪಿಗೆಯಿಂದ ನಿರ್ಲಕ್ಷ್ಯವಾಗಿ ಹೊರಟಿರುತ್ತಿದ್ದ ಎಣ್ಣೆ ಕಾಣದ

ಕೆದರುಗೂದಲು; ಮಲೆನಾಡಿನ ಪದ್ಧತಿಯಂತೆ ಕಿವಿಗಳಲ್ಲಿ ಮಿರುಗು ತ್ತಿದ್ದ ಲೋಹದ ಒಂಟಿಗಳು; ಚಪ್ಪಟೆಯಾದ ಮೊರಡು ಮುಖ, ನೀಳವಲ್ಲದ ಮೂಗು, ಅವಿತುಕೊಂಡಿದ್ದರೂ ಕಾಂತಿಯಿಂದ ತೀಕ್ಷ್ಣ ವಾಗಿರುವ ಕಣ್ಣುಗಳು! ನನಗಿನ್ನೂ ಕಣ್ಣಿಗೆ ಕಟ್ಟಿದಂತಿದೆ ಆ ನಮ್ಮೂರ ಕಮ್ಮಾರ ಬೇಟೆಗಾರನ ಚಿತ್ರ!

ಅವನು ಕಬ್ಬಿಣದ ಕೆಲಸದವನು. ನಾನು ಎಷ್ಟೋ ಸಾರಿ ಅವನ ಕಮ್ಮಾರಸಾಲೆಗೆ ಹೋಗಿ, ಅವನು ಕಬ್ಬಿಣ ಕಾಸಿ ಬಡಿದಾಗ ಹಾರುತ್ತಿದ್ದ ಕೆಂಗೆದರುಗಿಡಿಗಳನ್ನು ನೋಡಿ ದೂರದೂರ ಓಡಿಹೋಗಿ ನೆಗೆದಾಡಿ ಕೈಚಪ್ಪಾಳೆ ಹೊಡೆದು ಕುಣಿಯುತ್ತಿದ್ದೆ. ಕಬ್ಬಿಣವನ್ನು ಕೂಡ ನೀರು ಮಾಡಿ ಬಡಿಯುತ್ತಿದ್ದುದರಿಂದ ನನಗೆ ಅವನಲ್ಲಿ ಏನೋ ಒಂದು ವಿಧವಾದ ಗೌರವವಿತ್ತು. ನನ್ನ ಜೀವಿತ ಯಾತ್ರೆಯಲ್ಲಿ ಪುಟ್ಟಾಚಾರಿಯಂತಹ ಇನ್ನೆಷ್ಟೋ ಜನರು ಕಣ್ಣೆದುರು ಬಂದು ಹೋಗಿದ್ದಾರೆ. ಆದರೆ ಅನೇಕರನ್ನು ಮರೆತುಬಿಟ್ಟಿದ್ದೇನೆ. ಪುಟ್ಟಾ ಚಾರಿಯನ್ನು ಮಾತ್ರ ಮರೆತಿಲ್ಲ. ಅವನ ವ್ಯಕ್ತಿತ್ವದಲ್ಲಿ ಏನೋ ಒಂದು ವಿಶೇಷವಿತ್ತೆಂದು ತೋರುತ್ತದೆ. ಅವನು ತನ್ನ ಅರಣ್ಯ ಸಾಹಸಗಳನ್ನು ಕುರಿತು ಕತೆಹೇಳಲು ತೊಡಗಿದನೆಂದರೆ ಹುಡುಗರಾದ ನಾವಂತೂ ಇರಲಿ ದೊಡ್ಡವರಾದವರೂ ಕೂಡ ಕಣ್ತೆರೆದು ಕೇಳುತ್ತಿ ದ್ದರು. ಅವನ ವಾಣಿಯಲ್ಲಿ ಅದೇನೋ ಒಂದು ಆಕರ್ಷಣಶಕ್ತಿಯಿ ತ್ತೆಂದು ತೋರುತ್ತದೆ.

ಅವನು ಸತ್ತು ಹತ್ತು ಹನ್ನೆರಡು ವರುಷಗಳಾಗಿಹೋದುವು. ಅನೇಕರಂತೆ ಅವನೂ ಸತ್ತುಹೋದನು. ಆ ಬಡವನ ಮರಣವು ಪತ್ರಿಕೆಗಳ ಶ್ರೀಮಂತದೃಷ್ಟಿಗೆ ಬೀಳಲಿಲ್ಲ. ನಮ್ಮೂರಿನವರೂ ಕೂಡ ಅವನು ಸತ್ತ ತರುವಾಯ ಕೆಲವು ದಿನಗಳು ಮಾತ್ರ ಅವನ ವಿಚಾರ ಮಾತಾಡುತ್ತಿದ್ದರು. ಆಮೇಲೆ ಜಗತ್ತಿನ ಇತರ ವ್ಯಾಪಾರಗಳ ಪ್ರವಾಹವು ಮನೋರಾಜ್ಯದಲ್ಲಿ ಹರಿದುಬಂದುದರಿಂದ ಆ ಬಡವನು ಸುಪ್ತಚಿತ್ತದ ವೈತರಣೀ ನದಿಯಲ್ಲಿ ಮುಳುಗಿಹೋದನು. ಹೋದವ

ರೆಲ್ಲ ಕಂಡಿರುವ, ಇರುವರಾರೂ ಕಾಣದ, ಹೋಗುವರೆಲ್ಲ ಕಾಣುವ, ಮೇರೆಯನ್ನೇ ಕಾಣದ, ಮಾಯೆಯ ಕಡಲಿಗೆ ತೃಣದಂತೆ ತೇಲಿ ಹೋದನು.

ಪುಟ್ಟಾಚಾರಿಯ ಅಂತ್ಯವು ಅತ್ಯಂತ ಶೋಚನೀಯವಾಗಿತ್ತು. ಯಾವನ ಇಚ್ಛೆಗೆ ಕಬ್ಬಿಣವು ತಲೆಬಾಗುತ್ತಿತ್ತೋ ಅಂತಹವನು ಅಣಬೆ ಯಂತೆ ಹುಳುತಿಂದು ಕೊಳೆತು ತೀರಿಕೊಂಡನು. ಹೊಟ್ಟೆಯಲ್ಲಿ ಏನೋ ಒಂದು ಬಾವೆದ್ದು ಬಹಳಕಾಲ ನರಳಿದನು. ಆ ಕಾಡಿನಲ್ಲಿ ಡಾಕ್ಟರುಗಳಿರಲಿಲ್ಲ. ಹಳ್ಳಿಯ ವೈದ್ಯರು ಊಹೆಯ ಮೇಲೆ ಮದ್ದು ಕೊಟ್ಟರು. ರೋಗಿಯು ಚರ್ಮಮಾತ್ರ ಆವೃತವಾದ ಅಸ್ಥಿಪಂಜರ ವಾದನು. ನೋಡಿಕೊಳ್ಳುವುದಕ್ಕೆ ಹೆಂಡಿರು ಮಕ್ಕಳು ಯಾರೂ ಇರಲಿಲ್ಲ. ಅವನು ಏಕಾಂಗಿಯಾಗಿದ್ದನು. ಎಲ್ಲರನ್ನೂ ಕಳೆದುಕೊಂಡಿ ದ್ದನು. ಇತರರು ಶುಶ್ರೂಷೆಮಾಡಿದರು, ದನಕರುಗಳಿಗೆ ಮಾಡು ವಂತೆ. ಅವರ ಶುಶ್ರೂಷೆಯಲ್ಲಿ ನಿಷ್ಕಾಮ ಕರ್ಮವು ಚೆನ್ನಾಗಿ ತೋರು ತ್ತಿತ್ತು. ಮಳೆಗಾಲದಲ್ಲಿ ಒಂದು ದಿನ ಪ್ರಕೃತಿಯೆಲ್ಲ ಘೋರವಿಷಣ್ಣ ವಾಗಿದ್ದ ಸಮಯದಲ್ಲಿ ಜಗನ್ಮಾತೆಯು ಪುಟ್ಟಾಚಾರಿಯನ್ನು ತಬ್ಬಲಿ ಭೂಮಿಯಿಂದ ಎತ್ತಿಕೊಂಡು ಹೋದಳು. ಅನೇಕರು ಶಾಸ್ತ್ರಕ್ಕಾಗಿ ಶೋಕವನ್ನು ನಟಿಸಿದರು. ಒಬ್ಬರೂ ಕಣ್ಣೀರು ಸುರಿಸಲಿಲ್ಲ. ಜಡಿ ಮಳೆ ಮಾತ್ರ ಹೋ ಎಂದು ಸುರಿಯುತ್ತಿತ್ತು.

ಅವನು ತೀರಿಹೋದ ಮೇಲೆ ಜನರು ಏನೇನೋ ಮಾತಾಡಿ ಕೊಂಡರು. ಅವನು ಗೋಹತ್ಯೆ ಮಾಡಿದ ಪಾಪಕ್ಕಾಗಿಯೇ ಆ ರೀತಿ ಕೊಳೆತು ಸತ್ತನು ಎಂದರು. ಅವನು ಎಷ್ಟೋ ಕಾಡು ಪ್ರಾಣಿಗಳನ್ನು ಕೊಂದಿದ್ದನು. ಮಾಂಸಾಹಾರಿಗಳಾದ ಸಮ್ಮೊರಿನವರು ಅದನ್ನು ಪಾಪ ವೆಂದು ಪರಿಗಣಿಸಲಿಲ್ಲ. "ಕೊಂದ ಪಾಪ ತಿಂದು ಪರಿಹಾರ!" ಎಂದು ಧರ್ಮಶಾಸ್ತ್ರವಿದೆಯಂತೆ. ಆದರ ಪುಟ್ಟಾಚಾರಿಯು ಪ್ರಮಾದದಿಂದ ಎರಡು ಗಾಡಿಯ ಎತ್ತುಗಳನ್ನು ಗುಂಡು ಹೊಡೆದು ಕೊಂದಿದ್ದನು. ಆ ಪಾಪದಿಂದಲೇ ಅವನು ಹಾಗೆ ಸತ್ತನೆಂದು ಜನರು ನಿರ್ಣಯಿಸಿದರು.

ಅವನು ಮಾಡಿದ ಗೋಹತ್ಯೆಯ ಉಪಾಖ್ಯಾನವನ್ನು ನಿಮಗೆ ಸಂಕ್ಷೇಪವಾಗಿ ಹೇಳಿಬಿಡುತ್ತೇನೆ.

ಪುಟ್ಟಾಚಾರಿ ಒಂದು ದಿನ ತಿಂಗಳುಬೆಳಕಿನ ರಾತ್ರಿಯಲ್ಲಿ ನಡು ಗಾಡಿನಲ್ಲಿದ್ದ ಒಂದು ಹಣ್ಣಿನ ಮರಕ್ಕೆ ಮರಸಿಗೆ ಹೋದನು. ಆ ಹಣ್ಣಿನ ಮರಕ್ಕೆ ಕಡವೆಗಳು ಬರುತ್ತಿದ್ದುವು. ನಡು ರಾತ್ರಿಯಲ್ಲಿ ಅವನು ನಿದ್ದೆಗೆಟ್ಟು ತಲೆ ಸರಿಯಿಲ್ಲದೆ ಅರೆಎಚ್ಚತ್ತು ಕುಳಿತಿದ್ದಾಗ ಪಕ್ಕದ ಊರಿನ ಶೇಷಣ್ಣನ ಗಾಡಿಎತ್ತುಗಳೆರಡು ಮೇಯುತ್ತ ಮೇ ಯುತ್ತ ಅರಣ್ಯಮಧ್ಯದಲ್ಲಿದ್ದ ಆ ಹಣ್ಣಿನ ಮರಕ್ಕೆ ಬಂದುವು. ಮೊದಲು ಒಂದು ಎತ್ತು ಬಂತು. ಆ ಹಳುಎಿನಲ್ಲಿ, ಆ ಮಾಯಕಾರಿ ಯಾದ ನೆರಳುನೆರಳಾದ ಬೆಳ್ದಿಂಗಳಲ್ಲಿ ಪುಟ್ಟಾಚಾರಿಯ ಕಣ್ಣಿಗೆ ಕಡವೆ ಯೇ ಬಂದಂತಾಯಿತು. ಒಂದು ಗುಂಡು ಹೊಡೆದನು. ಪ್ರಾಣಿಯು ಬಿತ್ತು. ಪುಟ್ಟಾಚಾರಿ ಮರದ ಅಟ್ಟಣೆಯ ಮೇಲೆಯೇ ತನ್ನ ಕೇಪಿನ ಕೋವಿಗೆ ಈಡು ತುಂಬಿ ಕೆಳಗಿಳಿಯಬೇಕು ಎನ್ನುವಷ್ಟರಲ್ಲಿ ಮತ್ತೊಂದು ಎತ್ತೂ ಬಂದಿತು. ಕಡವೆ ಬಿತ್ತೆಂದು ಹಿಗ್ಗಿಹೋಗಿದ್ದ ಅವನಿಗೆ ಸಾಕಾದಷ್ಟು ವಿವೇಕವಿರಲಿಲ್ಲ. ಮತ್ತೊಂದು ಕಡವೆ ಒಂ ತೆಂದು ತಿಳಿದು ಅದಕ್ಕೂ ಒಂದು ಗುಂಡು ಹೊಡೆದನು. ಅದೂ ಬಿತ್ತು. ಬೇಟೆಗಾರನು ಪರಮಸಂತೋಷದಿಂದ ಮರಸಿನಿಂದ ಇಳಿದು ಹೋಗಿ ನೋಡಿದನು. ಬಹಳ ಗೋಳಾಡಿ ಕಣ್ಣೀರು ಸುರಿದನು. ಬಸವಣ್ಣ ನನ್ನು ಕೊಂದೆನಲ್ಲಾ ಎಂದು ಅತಿಯಾಗಿ ಪಶ್ಚಾತ್ತಾಪ ಪಟ್ಟನು. ಪಶ್ಚಾತ್ತಾಪವೇ ಸರ್ವೋತ್ತಮವಾದ ಪ್ರಾಯಶ್ಚಿತ್ತ ಎಂದು ಹೇಳಿದ ಯೇಸುಕ್ರಿಸ್ತನ ವಾಕ್ಯವು ಸತ್ಯವಾದರೆ ಪುಟ್ಟಾಚಾರಿಯು ಗಂಗಾ ಸ್ನಾನ ಮಾಡಿದನೆಂದೇ ಭಾವಿಸಬೇಡವೆ? ಜನಗಳು ಅವನನ್ನು ಬಾಯಿಗೆ ಬಂದಂತೆ ಬಯ್ದರು. ಊರ ಪಟೇಲರು ಶೇಷಣ್ಣನಿಗೆ ಅವನಿಂದ ದಂಡ ಕೊಡಿಸಿದರು. ಆದರೂ ಜನರ ಬಾಯಿ ನಿಲ್ಲಲಿಲ್ಲ. "ನಿನಗೆ ದುರ್ಮರಣ ವಾಗುತ್ತೆ, ನೀನು ಕೊಳೆತೇ ಸತ್ತುಹೋಗುವೆ" ಎಂದು ಎಲ್ಲ ಪುಟ್ಟಾ ಚಾರಿಗೆ ಹೇಳಿದರು. ಪಾಪ, ಅವನಿಗೂ ಮೂಢಭಕ್ತಿ! ನಂಬಿದನು!

ಬಹುಶಃ ಅವನ ನಂಬಿಕೆಯೇ ಅವನನ್ನು ಕಡೆಗಾಲದಲ್ಲಿ ಪೀಡಿಸಿತೆಂದು ತೋರುತ್ತದೆ. ಸಾವಿರಾರು ಪ್ರಾಣಿಗಳನ್ನು ನಿರ್ಲಕ್ಷ್ಯವಾಗಿ ಸುಟ್ಟು ಹಾಕುತ್ತಿದ್ದ ಅವನು ಗೋಹತ್ಯೆಯಿಂದಲೇ ಮಹಾ ಪಾಪ ಎಂದು ನಂಬಿಬಿಟ್ಟನು. ಅವನು ಭಗವದ್ಗೀತೆಯನ್ನು ಓದಿರಲಿಲ್ಲ.

ಅಂತೂ ಪುಟ್ಟಾಚಾರಿ ಕಡೆಗಾಲದಲ್ಲಿ ದಿಕ್ಕಿಲ್ಲದೆ ಸರಳಿ ಸರಳಿ ಮನೆಗೆ ಹೋದನು. ಜನರು ಅವನು ಮಾಡಿದ ಒಂದೇ ಒಂದು ಪಾಪ ವನ್ನು ನೆನಪಿನಲ್ಲಿ ಇಟ್ಟುಕೊಂಡರೇ ಹೊರತು, ಪುಣ್ಯಕಾರ್ಯಗಳನ್ನೆಲ್ಲ ಮರೆತೇ ಬಿಟ್ಟರು. ಅವನು ಎಷ್ಟು ಹುಲಿಗಳನ್ನು ಹೊಡೆದು ಕೊಂದಿದ್ದ! ಒಂದು ಹುಲಿಯನ್ನು ಕೊಂದರೆ ಕಡೆಯಪಕ್ಷ ಐವತ್ತು ಗೋವು ಗಳನ್ನು ಕಾಪಾಡಿದಂತಾಗಲಿಲ್ಲವೇ? ಎರಡು ಗೋವುಗಳನ್ನು ಕೊಂದ ಪಾಪವೆಲ್ಲಿ? ನಾಲ್ಕೈದು ಹುಲಿಗಳನ್ನು ಕೊಂದ ಪುಣ್ಯವೆಲ್ಲಿ? ದೇವರು ಎಂತಹ ಕೋಮಟಿಯಾದರೂ ಕೂಡ, ಅವನ ತಕ್ಕಡಿ ಎಷ್ಟು ಕೃತ್ರಿಮ ವಾಗಿದ್ದರೂ ಕೂಡ, ಪುಣ್ಯದ ಭಾಗವು ಪಾಪಕ್ಕಿಂತ ನೂರೈವತ್ತ ರಷ್ಟು ಮಿಗಿಲಾಗುವುದಿಲ್ಲವೆ? ನೀವೇ ಆಲೋಚಿಸಿ ನೋಡಿ!

ಏನೇನೋ ಮಾತನಾಡುತ್ತ ರಮಣೀಯವಾಗಿರುವ ಪುಟ್ಟಾ ಚಾರಿಯ ಕಾಡುಕೋಳಿ ಬೇಟೆಯ ವಿಚಾರ ಹೇಳಲು ಹೋಗಿ ಶೋಚ ನೀಯವಾಗಿರುವ ಅವನ ಅಂತ್ಯದ ವಿಚಾರ ಹೇಳುತ್ತ ಕುಳಿತುಬಿಟ್ಟೆ. ದಯವಿಟ್ಟು ಕ್ಷಮಿಸಿಬಿಡಿ. ನನ್ನ ಹೊಟ್ಟೆಯಲ್ಲಿ ಏನೋ ಮರುಕ ಉತ್ಪತ್ತಿಯಾಯಿತು; ಅದಕ್ಕೋಸ್ಕರ ಅದನ್ನೆಲ್ಲಾ ಹೇಳಿದ್ದು. ನನಗೆ ಒಂದೊಂದು ಸಾರಿ, ಮನುಷ್ಯನು ಮನುಷ್ಯನಿಗೆ ಮಾಡುವ ಅನ್ಯಾ ಯವನ್ನು ಯೋಚಿಸಿಕೊಂಡರೆ ಕೋಪ ಕಣ್ಣೀರು ಎಲ್ಲಾ ಒಟ್ಟಿಗೆ ಬರುತ್ತವೆ. ಅದಕ್ಕೇ ಸಿಟ್ಟಿನಿಂದ "ತಬ್ಬಲಿ ಭೂಮಿ" ಎಂದು ಹೇಳಿದ್ದು.

ಮರೆತುಬಿಡಿ. ದಯವಿಟ್ಟು ಮೇಲೆ ಹೇಳಿದ್ದನ್ನೆಲ್ಲ ಮರೆತು ಬಿಡಿ. ಇನ್ನು ಪುಟ್ಟಾಚಾರಿಯ ಕಾಡುಕೋಳಿ ಬೇಟೆಯ ವಿಚಾರ! ಇದೇನ್ರಿ? ದುಃಖಮುಖಮುದ್ರೆಯಿಂದ ಕುಳಿತುಬಿಟ್ಟಿದೀರಿ! ಇಂಥ

ದನ್ನೆಲ್ಲ ಮನಸ್ಸಿಗೆ ಬಹಳವಾಗಿ ಹಚ್ಚಿಕೊಂಡರೆ ಬದುಕುವುದು ಹೇಗೆ? ಮರೆಯಬೇಕು, ಸ್ವಾಮಿ! ಮರೆಯುವುದೇ ಮಾನವನಿಗೆ ಮದ್ದು! ಈಶ್ವರನು ಸ್ವರ್ಗದಲ್ಲಿ ಕಣ್ಣುಮುಚ್ಚಿಕೊಂಡು ಕುಳಿತಿದ್ದಾನೆ! ನಾವು ಭೂಮಿಯಲ್ಲಿ ಕಣ್ಣುಮುಚ್ಚಿಕೊಂಡೇ ಕಾಲ ನೂಕಬೇಕಾದರೆ! ಅಕಸ್ಮಾತ್ತಾಗಿ ಕಣ್ದೆರೆದಾಗ ಆಗುತ್ತೆ ನರಕದರ್ಶನ! ಆಗ ಫಕ್ಕನೆ ಕಣ್ಣುಮುಚ್ಚಿಕೊಂಡರಾಯ್ತು! ಅದೇ ಸ್ವರ್ಗ! ಮತ್ತಿನ್ನೇನು, ಸ್ವಾಮಿ? ಬೆಳಕೇ ನರಕ; ಕತ್ತಲೆಯೇ ನಾಕ! ಹೋಗಲಿ, ಬೆನ್ನುತಟ್ಟಿಕೊಂಡು ಹುಷಾರಾಗಿ! ಎಲ್ಲಿ? ಸ್ವಲ್ಪ ನಕ್ಕುಬಿಡಿ! ಹಾ ಗೆ!! ಅದೀಗ ತತ್ತ್ವಜ್ಞಾನಿಯ ಲಕ್ಷಣ!!!

ಪುಟ್ಟಾಚಾರಿ ಬೆಳಗ್ಗೆ ನಸುಕು ಹರಿಯುವುದರಲ್ಲಿಯೇ ಎದ್ದು ಕಮ್ಮಾರಸಾಲೆಯಲ್ಲಿ ಕೆಲಸಕ್ಕೆ ಷುರುಮಾಡಿದ್ದನು. ಮಾಡಬೇಕಾದ ಕೆಲಸಗಳೂ ವಿಪರೀತವಾಗಿದ್ದುವು. ತಿದಿಯನ್ನು ಸರಿಮಾಡಿ, ಇದ್ದಲನ್ನು ಕುಲುಮೆಗೆ ಹಾಕಿ ಬೆಂಕಿ ಹೊತ್ತಿಸಿದನು. ಬೇಕಾದ ಸಾಮಾನುಗಳನ್ನೆಲ್ಲ ಹತ್ತಿರ ರಾಶಿ ಹಾಕಿಕೊಂಡು ಅಡಿಗಲ್ಲಿಗೆ ಎದುರಾಗಿ ಕುಳಿತನು. ಅಷ್ಟರಲ್ಲಿ ಕಾಡಿನಲ್ಲಿ ಕಾಡುಕೋಳಿಗಳು ಕೂಗುವ ನೀಳ್ದನಿಯನ್ನು ಕೇಳಿ ಅವನ ಮನಸ್ಸು ಅತ್ತಕಡೆ ಎಳೆಯಲಾರಂಭಿಸಿತು. ಅವನು ಹುಟ್ಟು ಕಮ್ಮಾರನಾಗಿದ್ದರೂ ಕಬ್ಬಿಣದ ಕೆಲಸಕ್ಕಿಂತ ಬೇಟೆಯ ಕಾಡಿನ ಕೆಲಸದಲ್ಲಿಯೇ ಅವನಿಗೆ ಮಮತೆ ಹೆಚ್ಚು. ಒಲೆಗೆ ಸ್ವಲ್ಪ ನೀರು ಚಿಮುಕಿಸಿ, ಸಾಮಾನುಗಳನ್ನೆಲ್ಲ ಹಿಂದಕ್ಕಿಟ್ಟು ಕೋವಿಯನ್ನು ತೆಗೆದುಕೊಂಡು ಹೊರಟನು. ಅವನ ಕಾಲು ಕಟ್ಟಿಹಾಕಿದ್ದ ಜೂಜಿನ ಕುದುರೆಯ ಕಾಲಾಗಿದ್ದುವು. ಬೇಗಬೇಗನೆ ಕಾಡುಕೋಳಿಗಳ ಆಹ್ವಾನವಾಣಿಯನ್ನು ಕೇಳುತ್ತ ಅಡವಿಯೊಳಗೆ ಹೋಗುತ್ತಿದ್ದನು. ಹಿಂದೆ ಯಾರೋ ಕೂಗಿದಂತಾಯ್ತು! ಆಚಾರಿ ತಿರುಗಿದನು. ನೋಡುತ್ತಾನೆ, ಯಜಮಾನರು! ರಾಮಣ್ಣಗೌಡರು ಸ್ವಲ್ಪ ವ್ಯಂಗ್ಯವಾಣಿಯಿಂದ "ಆಚಾರ್ಯರ ಸವಾರಿ ಎಲ್ಲಿಗೆ ಹೊರಟಿತು?" ಎಂದರು. ಕದಿಯುವಾಗಲೇ ಪೋಲೀಸಿನವರ ಕೈಗೆ ಸಿಕ್ಕಿಬಿದ್ದ ಕಳ್ಳ

ನಾದನು ಪುಟ್ಟಾಚಾರಿ! ಗೌಡರ ಧ್ವನಿಯಲ್ಲಿ ಕೋಪವಿದೆ ಎಂದು ಗೊತ್ತಾಯಿತು. ನಿಸ್ಸಹಾಯಕ ಮಂದಸ್ಮಿತವನ್ನು ಬೀರಿ ಪುಟ್ಟಾಚಾರಿ "ಎಲ್ಲಿಗೂ ಇಲ್ಲ; ಕಾಡಿನ ಕಡೆ ಹೋಗಿ ಬರುತ್ತೇನೆ." ಎಂದನು. "ನಿನ್ನ ದೆಸೆಯಿಂದ ಸುಖವಿಲ್ಲ! ನೇಗಿಲ ಕುಳಗಳಾಗಲಿಲ್ಲ, ಕತ್ತಿಗಳಾಗಿಲ್ಲ. ಹಾರೆಗುದ್ದಲಿಯಂತೂ ಒಂದು ತಿಂಗಳಿಂದ ಅಲ್ಲಿಯೇ ಬಿದ್ದಿವೆ. ಒರಲೆ ಕೈಲಿ ತಿನ್ನಿಸುತ್ತೀಯೋ ಏನೋ ಗೊತ್ತಿಲ್ಲ. ದಿನ ಬೆಳಗಾದರೆ ಕೋವಿ, ಕಾಡು, ಮರಸು, ಷಿಕಾರಿ! ನೀನು ಹೀಗೆ ಮಾಡಿದರೆ ಕೋವಿ ಕಸಿದಿಟ್ಟು ಬಿಡುತ್ತೇನೆ!" ಎಂದರು. ಪುಟ್ಟಾಚಾರಿ ಹಲ್ಲು ಹಲ್ಲು ಬಿಡುತ್ತ ಮೆಲ್ಲ ಮೆಲ್ಲಗೆ ಕಾಡಿಗೆ ಜಾರಿದನು. ಗೌಡರೂ ಗೊಣಗುತ್ತ ಸುಮ್ಮನಾದರು. ಅವರಿಗೆ ಸಂತೋಷವಾಗದೆ ಇರಲಿಲ್ಲ. ಏಕೆಂದರೆ ಪುಟ್ಟಾಚಾರಿ ಕಾಡಿಗೆ ಹೋದರೆ ಏನಾದರೊಂದು " ಪ ಕಾರ " ವಾಗದಿರುವುದಿಲ್ಲ. ಪಕಾರವೆಂದರೆ ಪಲ್ಯಕ್ಕೆ, ಅದರಲ್ಲಿಯೂ ಮಾಂಸದ ಪಲ್ಯಕ್ಕೆ, ಸೂಚನೆಯ ಹೆಸರು! ಮಾಂಸಾಹಾರಿಗಳಲ್ಲದ ಬ್ರಾಹ್ಮಣರು ಯಾರಾದರೂ ಜೊತೆಯಲ್ಲಿದ್ದರೆ 'ಪಕಾರ'ವೆಂಬ ಸಂಕೇತ ಶಬ್ದವನ್ನು ತಮ್ಮ ತಮ್ಮಲ್ಲಿಯೇ ಉಪಯೋಗಿಸಿಕೊಳ್ಳುತ್ತಾರೆ.

ಪುಟ್ಟಾಚಾರಿ ಕಾಡಿಗೇರಿದನು ಕಾನುಬಾಗಿಲಿನಿಂದ ಮ್ಯಾರರ-ಗುಡಿಹೊಂಡದ ಮಾರ್ಗವಾಗಿ ಕೆಮ್ಮಣ್ಣುಬ್ಬಿನ ಓರೆಯನ್ನು ಹಾದು ಬಿಳುಗಲ್ಲುತುಂಡು ನೆತ್ತಿಗೆ ಹೊರಟನು. ಆಗಲೇ ಸುಮಾರು ನಾಲ್ಕೈದು ಮೈಲಿಗಳ ಅರಣ್ಯ ಪೂರೈಸಿತ್ತು. ಹಾಳು ಕಾಡುಕೋಳಿಗಳು ಕೂಗುತ್ತಿದ್ದುವೇ ಹೊರತು ಕಣ್ಣಿಗೆ ಕಾಣುತ್ತಿರಲಿಲ್ಲ. ಬೇಗ ಮರೆಯಾಗಿ ತಪ್ಪಿಸಿಕೊಂಡುವು. ಆಚಾರಿಗೆ ರೇಗಿಹೋಯಿತು. ಒಂದು ಕಡೆ ಕುಳಿತು ಒಂದು ತೆಳುವಾದ ಚಿಗುರೆಲೆಯನ್ನು ಎರಡು ಹೆಬ್ಬೆರಳುಗಳ ನಡುವೆ ಇಟ್ಟುಕೊಂಡು ಹುಂಜದಂತೆ ಕೇಕೆ ಹಾಕಿದನು, ಹೇಂಟೆ ಬರಲಿಲ್ಲ. ಹೇಂಟೆಯು ಹುಂಜವನ್ನು ಕರೆಯುವಂತೆ ಕೂಗಿದನು; ಹುಂಜವಾವುದೂ ಬರಲಿಲ್ಲ. ವಸಂತಮಾಸವಾಗಿದ್ದರೂ

ಪ್ರಾತಃಕಾಲವಾಗಿದ್ದುದರಿಂದ ಅವುಗಳಿಗೆ ಕಾಮುಸ ಕಾಟವಿರಲಿಲ್ಲ ಎಂದು ತೋರುತ್ತದೆ. ಹೊಟ್ಟೆಯ ಕಾಟವೇ ಹೆಚ್ಚಾಗಿದ್ದುದರಿಂದ ಮೇವು ಹುಡುಕುತ್ತಿದ್ದುವೇ ಹೊರತು ಆಚಾರಿಯ ಮೋಹದ ವಾಣಿಗೆ ಮರುಳಾಗಿ ಮಾಯದ ಬಲೆಗೆ ಬೀಳಲಿಲ್ಲ.

ಆಚಾರಿಗೆ ಇನ್ನೂ ರೇಗು ಹೆಚ್ಚಾಯಿತು. ಅದರಲ್ಲಿಯೂ ಬೇಟೆಯಾಗದೆ ಬರುಗೈಯಲ್ಲಿ ಹಿಂತಿರುಗಿದರೆ ಗೌಡರು ಮತ್ತೂ ಕೋಪಗೊಳ್ಳುವರು! ಏನಾದರೂ ಮಾಡಿ ಏನನ್ನಾದರೂ ಹೊಡೆದುಕೊಂಡೇ ಹೋಗಬೇಕೆಂದು ದೃಢನಿಶ್ಚಯ ಮಾಡಿಕೊಂಡನು. ಅಷ್ಟರಲ್ಲಿ ಬಿಳುಗಲ್ಲುತುಂಡಿನ ನೆತ್ತಿಯ ಕಾಡಿನಲ್ಲಿ ಒಂದು ಹುಂಜ ಕೇಕೆ ಹಾಕಿತು. ಆಚಾರಿಯು ಅದನ್ನು ಕೊಂದೇ ಬಿಡುತ್ತೇನೆ ಎಂದು ಶಪಥ ಹಾಕಿಕೊಂಡು ಕೆರಳಿ ಮೇಲೇರಿದನು. ಎತ್ತುಬೀಳು, ಕೆಂಜಿಗೆಮುಳ್ಳು, ಬಳ್ಳಿತುರಚಿ ಯಾವುದನ್ನೂ ಲಕ್ಷ್ಯಮಾಡದೆ ನಡೆದನು. ಅಷ್ಟು ಹೊತ್ತಿಗೆ ಕೋಳಿ ಕೂಗುನಿಲ್ಲಿಸಿತ್ತು. ದರಿದ್ರ ಜಂತು ಅಲ್ಲೇ ಎಲ್ಲಿಯೋ ಇರಬೇಕೆಂದು ಭಾವಿಸಿ ಆಚಾರಿ ಧಾವಿಸಿದನು.

ಅರಣ್ಯವು ಇಳಿಜಾರಾಗಿತ್ತು. ಆಚಾರಿ ಕೆಳಗಿನಿಂದ ಮೇಲೇರುತ್ತಿದ್ದನು. ಹೋಗುತ್ತ ದೂರದಲ್ಲಿ ಏನನ್ನೋ ಕಂಡು ನಿಂತನು. ಮೇಲೆ ಕಾಡಿನ ಮಧ್ಯದಲ್ಲಿ ಒಂದೆರಡು ಮಾರು ಅಗಲ ಬಯಲಾಗಿತ್ತು. ಹುಲ್ಲು ಎದೆಯೆತ್ತರ ಬೆಳೆದಿತ್ತು. ಆ ಹುಲ್ಲಿನ ಮೇಲೆ ಒಂಬತ್ತು ಗಂಟೆಯ ಬಿಸಿಲು ಬಿದ್ದಿತ್ತು. ಅಲ್ಲಿ ಹೆಣ್ಣು ಹೆಬ್ಬುಲಿಯೊಂದು ತನ್ನ ಮರಿಗಳೊಡನೆ ಎಳಬಿಸಿಲಿನಲ್ಲಿ ಮಲಗಿ ಚೆಲ್ಲಾಟವಾಡುತ್ತಿತ್ತು. ಹುಲಿಯ ಬಾಲದ ತುದಿ ಮಾತ್ರ ಬೆಳೆದ ಹುಲ್ಲಿನ ಮೇಲೆ ಬಂದು ಬಿಸಿಲಿನಲ್ಲಿ ಕುಣಿದಾಡುತ್ತಿತ್ತು. ಅದನ್ನು ಆಚಾರಿ ಕಾಡುಕೋಳಿಯ ನೀಲುಪುಕ್ಕದ ನೀಳ್ಗರಿಗಳೆಂದು ನಿರ್ಧರಿಸಿದನು. ಕಾಡುಕೋಳಿಯ ಹುಂಜದ ಪುಕ್ಕದಲ್ಲಿ ಇತರ ಎಲ್ಲಗರಿಗಳಿಗಿಂತಲೂ ಉದ್ದವಾಗಿ ಎರಡು ಗರಿಗಳು ಮಾತ್ರ ಬಿಂಕದಿಂದ ಕೊಂಕಿ ತಲೆಯೆತ್ತಿಕೊಂಡಿರುವುವು. ಅಂತೂ ಕೆರಳಿದ್ದ ಆಚಾರಿಯ ಕಂಗಳಿಗೆ ಕಾಡುಕೋಳಿಯ ನೀಳ್ಗರಿಗಳಂತೆ ತೋರಿತು

ಹುಲಿಯ ತುದಿ ಬಾಲ. ಶುದ್ಧ ಪೆಚ್ಚು! ಸ್ವಲ್ಪ ಯೋಚನೆ ಮಾಡಿದ್ದರೆ ಸತ್ಯ ಹೊಳೆಯುತ್ತಿತ್ತು. ಎದೆಯೆತ್ತರ ಬೆಳೆದ ಹುಲ್ಲಿನಲ್ಲಿ ಕಾಡುಕೋಳಿಗಳಿದ್ದರೆ ಎಷ್ಟುದ್ದ ಪುಕ್ಕವಾದರೂ ಹುಲ್ಲಿನ ಮೇಲೆ ಕಾಣುವುದಾದರೂ ಹೇಗೆ? ಕುಣಿಯುವ ನವಿಲಿನ ಪುಕ್ಕವಾದರೂ ಕಾಣುವುದಿಲ್ಲ! ಅಂತೂ ಆಚಾರಿ ಕಾಡುಕೋಳಿ ತನ್ನ ಬಗಲಿಗೆ ಬಿತ್ತೆಂದು ತಿಳಿದು ಹಿಗ್ಗಿದನು. ಅದಕ್ಕೆ ಕಾಣಿಸಿಕೊಳ್ಳಬಾರದೆಂದು ನೆಲದವರೆಗೂ ಹಬ್ಬಿ ಬಾಗಿ ಹಳುವಿನಲ್ಲಿ ತೂರತೊಡಗಿದನು. ಅದಷ್ಟು ಸಮೀಪಕ್ಕೆ ಹೋಗಿ ಮೆಲ್ಲಗೆ ಎದ್ದು ನಿಂತು ಸುಡಬೇಕೆಂದು ನಿಶ್ಚಯಿಸಿ ಬಹಳ ಕಷ್ಟಪಟ್ಟು ಮೆಲ್ಲ ಮೆಲ್ಲಗೆ ಮುಂದುವರಿದನು.

ಅತ್ತ ತಾಯಿಹುಲಿಯು ತನ್ನ ಹಸುಳೆಗಳೊಡನೆ ಹಸುಳೆಬಿಸಿಲಿನಲ್ಲಿ ಮುದ್ದಾಟವಾಡುತ್ತಿತ್ತು. ಮರಿಗಳು ಒಂದರ ಮೇಲೊಂದು ನೆಗೆದು ತಾಯಿಯ ಸುತ್ತಲೂ ಕುಣಿದಾಡುತ್ತ, ಕೆಲವು ಸಾರಿ ಅಮ್ಮನ ಮೈಮೇಲೆ ಹಾರಿ ಕುಳಿತುಕೊಂಡು ಪಲ್ಗಿರಿಯುತ್ತ, ಚರ್ಮವನ್ನು ಆಟಕ್ಕೆ ಕಚ್ಚಿ ಎಳೆಯುತ್ತ, ನಡುನಡುವೆ ಕೆಸ್ ಪುಸ್ ಎನ್ನುತ್ತ ಚೆಲ್ಲಾಟವಾಡುತ್ತಿದ್ದುವು. ತಾಯಿಹುಲಿಯು ಮರಿಗಳನ್ನು ಮುಂಗಾಲ್ಗಳಿಂದ (ಹುಲಿಯ ಮುಂದಿನ ಎರಡು ಕಾಲ್ಗಳನ್ನು ಕೈಗಳೆಂದು ಕರೆಯುತ್ತಾರೆ.) ನೂಕಿ ಕೆಡುಹುತ್ತ, ಬಾಯ್ದೆರೆದು ಬಾಯ್ದೆರೆದ ಮರಿಗಳ ದವಡೆಯನ್ನು ಕಡಿಯುವಂತೆ ನಟಿಸುತ್ತ, ಬಿಸಿಲಿನಲ್ಲಿ ತನ್ನ ಬಣ್ಣ ಬಣ್ಣದ ನುಣ್‌ನವಿರಿನ ಲಾಂಗೂಲವನ್ನು ಎತ್ತಿ ಆಡಿಸುತ್ತಿತ್ತು. ಹೀಗೆ ಆಟದಲ್ಲಿ ತಲ್ಲೀನವಾದ, ತನ್ನ ಮಕ್ಕಳೊಡನೆ ತನ್ನ ಹುಲಿತನವನ್ನು ಬಿಟ್ಟು ಬರಿಯ ತಾಯಿ ಮಾತ್ರವಾಗಿದ್ದ ಆ ಹೆಬ್ಬುಲಿಯು ದೂರದಲ್ಲಿ ಏನೋ ಸರಸರ ಸದ್ದಾಗುತಿದ್ದುದನ್ನು ಆಲಿಸಿ ಇದ್ದಕ್ಕಿದ್ದ ಹಾಗೆ ಆಟದ ಭಾವವನ್ನು ತೆಗೆದೊಗೆದು ಹಿಂಗಾಲ್ಗಳ ಮೇಲೆ ಕುಳಿತು ಮುಂಗಾಲ್ಗಳನ್ನು ನೀಳವಾಗಿ ಊರಿಕೊಂಡು ನಿಮಿರಿ ನಿಂತು ಅನಂತವಾದ ಅರಣ್ಯಪ್ರದೇಶವನ್ನು ಅನ್ವೇಷಕದೃಷ್ಟಿಯಿಂದ ಪರೀಕ್ಷಿಸತೊಡಗಿತು. ಮರಿಗಳು ಆಟವನ್ನು ನಿಲ್ಲಿಸಿ ತಾಯಿಯ ಹೊಟ್ಟೆಯಡಿ ಮೌನವಾಗಿ

ಹುದುಗಿದುವು. ದೂರದಲ್ಲಿ ಹುಲ್ಲು ಬೆಳೆದಿದ್ದ ಹಳುವು ಮೆಲ್ಲಗೆ ಅಲ್ಲಾಡುತ್ತಿದ್ದುದು ಹುಲಿಯ ಕಣ್ಣಿಗೆ ಬಿತ್ತು. ಹುಲ್ಲಿನ ಅಲ್ಲಾಟವು ತನ್ನ ಕಡೆಗೇ ಬರುತ್ತಿದ್ದುದೂ ಗೊತ್ತಾಯಿತು. ಹೆಬ್ಬುಲಿಯು ಮೀಸೆಯನ್ನು ಹುರಿಮಾಡಿಕೊಂಡು ಉಗ್ರದೃಷ್ಟಿಯಿಂದ ನೋಡತೊಡಗಿತು.

ಪುಟ್ಟಾಚಾರಿ ನೆಲಕ್ಕೆ ಹಬ್ಬಿಕೊಂಡೇ ಮೆಲ್ಲಗೆ ಬರುತ್ತಿದ್ದನು. ಆದಷ್ಟು ಸಮೀಪಕ್ಕೆ ಹೋದರೆ ಕೋಳಿಗೆ ಚೆನ್ನಾಗಿ ಗುರಿ ತಗುಲಿಸಬಹುದೆಂದು ಬಗೆದು ತಲೆಯೆತ್ತಿ ನೋಡದೆ ನುಗ್ಗುತ್ತಿದ್ದನು. ನುಗ್ಗುತ್ತನುಗ್ಗುತ್ತ ಹುಲಿಗೆ ನಾಲ್ಕೈದು ಮಾರುದೂರ ಬಂದನು. ಅಷ್ಟರಲ್ಲಿ ಬಗ್ಗಿ ಬಗ್ಗಿ ನಡೆದು ಅವನಿಗೆ ಆಯಾಸವಾಗಿತ್ತು. ಇಷ್ಟುದೂರ ಬಂದುದು ಸಾಕೆಂದು ಭಾವಿಸಿ ನೆಲದ ಮೇಲೆ ಮಂಡಿಯೂರಿ ಕುಳಿತು ಕೋವಿಯನ್ನು ಸಿದ್ಧಪಡಿಸಿದನು. ಹುಲಿಯು ತಲೆಯೆತ್ತಿ ನೋಡುತ್ತಿತ್ತು. ಅದರ ತಲೆ ಮಾತ್ರ ಹುಲ್ಲಿನ ಮೇಲಿತ್ತು. ಅದಕ್ಕೂ ಕೂಡ ಪ್ರಾಣಿ ಇಂಥಾದ್ದೆಂದು ಗೊತ್ತಾಗಲಿಲ್ಲ. ಮನುಷ್ಯನೆಂದು ಗೊತ್ತಾಗಿದ್ದರೆ ಮೊದಲೇ ಮರಿಗಳನ್ನು ಕಟ್ಟಿಕೊಂಡು ಓಡಿಹೋಗುತ್ತಿತ್ತು. ನಮಗೆ ಹುಲಿಯನ್ನು ಕಂಡರೆ ಹೇಗೆ ಭಯವೋ ಹಾಗೆಯೆ ಹುಲಿಗೆ ನಮ್ಮನ್ನು ಕಂಡರೆ ಭಯ.

ಆಚಾರಿ ಕಾಡುಕೋಳಿಯು ಅಲ್ಲಿಯೇ ಮೇಯುತ್ತಿರಬೇಕೆಂದು ಭಾವಿಸಿ, ಕೋವಿಯನ್ನು ಹಾರಿಸಲು ಹವಣಿಸಿ ಹಿಡಿದುಕೊಂಡು, ಎಲ್ಲಿ ಕೋಳಿಗೆ ತಾನು ಕಂಡುಬರುವೆನೋ ಎಂಬ ಭಯದಿಂದ ಮೆಲ್ಲಗೆ ತಲೆಯನ್ನು ನಿಕ್ಕುಳಿಸಿಕೊಂಡು ಅರ್ಧ ಎದ್ದುನಿಂತು ನೋಡಿದನು! ಕೋಳಿಗೆ ಬದಲಾಗಿ ಬಣ್ಣಬಣ್ಣದ, ಕಣ್ಣುಕಣ್ಣಿನ, ನಿಂತಮೀಸೆಯ, ನಿಮಿರ್ದ ಕಿವಿಗಳ, ಚಿಲಿದ ಹಲ್ಗಳ, ಹೆಬ್ಬುಲಿಯ ಹೆಮ್ಮಂಡೆ! ಆಚಾರಿಗೆ ಹುಲಿಯ ಕಣ್ಗಳು ಬಂದು ತನ್ನ ಕಣ್ಗಳಿಗೆ ತಿವಿದಂತಾಯಿತು. ಮನುಷ್ಯನು ಅಷ್ಟು ಸಮೀಪ ತನ್ನ ಕೆಳಗಡೆ ಇರುವುದನ್ನು ಕಂಡು ತುಸುಬೆಚ್ಚಿದ ಹುಲಿಯು ಸರಿಯಾಗಿ ನಾಲ್ಕು ಕಾಲುಗಳ ಮೇಲೆಯೂ

ಧೀರವಾಗಿ ಎದ್ದುನಿಂತು ಗುರ್ರೆಂದಿತು. ಆಚಾರಿಗೆ ನೆತ್ತರು ನಾಡಿ ಗಳಲ್ಲಿ ಹೆಪ್ಪುಗಟ್ಟಿದಂತಾಯ್ತು. ಬೇಟೆಯ ಅನುಭವವು ಅವನಿಗೆ ಚೆನ್ನಾಗಿತ್ತು. ಹುಲಿಯ ರೀತಿನೀತಿಗಳು ಅವನಿಗೆ ಅಪರಿಚಿತವಾದು ವಾಗಿರಲಿಲ್ಲ. ಒಂದು ಕ್ಷಣದಲ್ಲಿಯೇ ಹುಲಿಯು 'ಮರಿಹುಲಿ' ಎಂದು ತಿಳಿದನು. ಮರಿಗಳು ಕಿಸ್‌ಪುಸ್ ಎನ್ನುತ್ತಿದ್ದುದೂ ಅವನಿಗೆ ಕೇಳಿಸಿತು. ಸಂದರ್ಭವು ಅತ್ಯಂತ ಅಪಾಯಕರವಾಗಿತ್ತು. ಯಾವಾಗ ಹುಲಿಯು ಎದ್ದುನಿಂತು ಮೈಮೇಲೆ ನೆಗೆಯುವಂತೆ ನಟಿಸಿತೋ ಆಗಲೇ ಆಚಾರಿಯೂ ಕೋವಿಯನ್ನು ಸಿದ್ಧವಾಗಿ ಹಿಡಿದುಕೊಂಡು ನೆಟ್ಟಗೆ ಎದ್ದು ನಿಂತೇಬಿಟ್ಟನು. ಒಂದುವೇಳೆ ಹುಲಿ ಮೇಲೆಬಿದ್ದರೆ ಸುಮ್ಮನೆ ಸಾಯುವುದಕ್ಕಿಂತ ಅದಕ್ಕೂ ಒಂದು ಗುಂಡು ತಗುಲಿ ಸಿಯೇ ಸಾಯುವೆನೆಂದು ನಿಶ್ಚಯಿಸಿ ನಿಂತನು. ಒಬ್ಬರನ್ನೊಬ್ಬರು ನೋಡುತ್ತ ನಿಂತರು.

ಇಬ್ಬರಿಗೂ ಪ್ರಾಣಸಂಕಟ. ಹುಲಿಗೆ ಮರಿಗಳ ಮೇಲಿನ ಮಮತೆ. ಆಚಾರಿಗೆ ಮನೆಯ ಮೇಲಿನ ಮಮತೆ. ಬಹುಶಃ ಮರಿ ಗಳಿಲ್ಲದಿದ್ದರೆ ಹುಲಿಯು ಆಚಾರಿ ತಲೆಯೆತ್ತಿ ನೋಡುವಷ್ಟರಲ್ಲಿಯೇ ಕಂಡು ಮಿಂಚಿ ಕಣ್ಮರೆಯಾಗಿಬಿಡುತ್ತಿತ್ತು. ಇಬ್ಬರಿಗೂ ಕಷ್ಟವಿರಲಿಲ್ಲ. ಈಗ ಮರಿಗಳನ್ನು ಬಿಟ್ಟು ಹುಲಿ ಏನೇ ಆಗಲಿ ಓಡುವುದಿಲ್ಲ. ಆಚಾ ರಿಗೆ ಈಡು ಹೊಡೆಯುವುದಕ್ಕೂ ಭಯ! ಹಿಂತಿರುಗುವುದಕ್ಕೂ ಭಯ! ಆಚಾರಿ ಹುಲಿಯು ಹಾರಿದರೆ ಹೊಡೆಯೋಣವೆಂದು ನಿಂತನು. ಹುಲಿ ಆಚಾರಿಯು ಮುಂದೆ ಹೆಜ್ಜೆಯಿಟ್ಟರೆ ಮೇಲೆ ಬೀಳುವುದು ಎಂದು ನಿಂತಿತು. ಇಬ್ಬರಿಗೂ ಮುಂದೇನು ಮಾಡಬೇಕೋ ಗೊತ್ತಾಗಲಿಲ್ಲ.

ಕಡೆಗೆ ಆಚಾರಿ ಒಂದು ಉಪಾಯ ಹೂಡಿದನು. ಹುಲಿಗೆ ಗೊತ್ತಾ ಗದಂತೆ ಹತ್ತು ಕ್ಷಣಕ್ಕೊಂದು ಹೆಜ್ಜೆಯಂತೆ ಹಿಂದುಹಿಂದಕ್ಕೆ ಮೆಲ್ಲಗೆ ಚಲಿಸತೊಡಗಿದನು. ಅವನ ದೃಷ್ಟಿಯು ಹುಲಿಯ ಮೇಲೆ ಇತ್ತು. ಕೈಗಳೆರಡೂ ಯಾವಾಗ ಬೇಕೆಂದರೆ ಆಗ ಈಡುಹಾರಿಸಲು ಸಿದ್ಧವಾ ಗಿಯೇ ಇದ್ದುವು. ಇಳಿಜಾರಾದ ಮೊರಡುಗುಡ್ಡವನ್ನು ಆ ಹಳುವಿ

ನಲ್ಲಿ ಹಿಮ್ಮೊಗವಾಗಿ ಇಳಿಯುವುದು ಒಂದು ದೊಡ್ಡ ಸಾಹಸವೇ ಸರಿ! ಅಂತೂ ಆಚಾರಿ ಎರಡುಹೆಜ್ಜೆ ಹಿಮ್ಮೆಟ್ಟುವನು. ಸ್ವಲ್ಪ ನಿಂತು ವಿಶ್ರಮಿಸಿಕೊಳ್ಳುವನು. ಹೀಗೆ ಮೆಲ್ಲಗೆ ಸರಿದನು. ಹುಲಿಗೆ ಮೊದಲು ಮೊದಲು ಅವನು ಸರಿದುದು ಗೊತ್ತಾಗಲಿಲ್ಲ. ಕಡೆಗೆ ಗೊತ್ತಾಯಿತೆಂದು ತೋರುತ್ತದೆ. ಏಕೆಂದರೆ ಆಚಾರಿಯು ಹಿಂದೆ ಹೋದಂತೆಲ್ಲ ಹುಲ್ಲಿನ ಮೇಲ್ಭಾಗದಲ್ಲಿರುತ್ತಿದ್ದ ಅವನ ದೇಹವು ಕಡಿಮೆಯಾಗುತ್ತ ಬಂತು. ಹುಲಿಯು ತನ್ನ ಕತ್ತನ್ನು ನೀಳವಾಗಿ ನಿಕ್ಕುಳಿಸುತ್ತಿತ್ತು. ಒಂದುಸಾರಿ ಹುಲಿಯು ಮೇಲೆ ಹಾರುವಂತೆ ಸಂಚುತೋರಿತು. ಆಚಾರಿ ಕೋವಿಯ ಕುದುರೆಯನ್ನು ಸದ್ದುಮಾಡದೆ ಎಳೆದನು. ಆದರೆ ಹುಲಿ ಹಾರಲಿಲ್ಲ; ಗುರ್ರೆಂದು ಅಲ್ಲಿಯೇ ನಿಂತಿತು. ಅದಕ್ಕೂ ಹಾಳು ಮನುಷ್ಯ ತೊಲಗಿದರೆ ಸಾಕಾಗಿತ್ತು. ಆಚಾರಿ ಪುನಃ ಕುದುರೆಯನ್ನು ಕೆಳಗಿಳಿಸಿ ತನ್ನ ಕಾರ್ಯಕ್ಕೆ ಕೈಹಾಕಿದನು. ಬಿಸಿಲೇರುತ್ತಿತ್ತು.

ಆಚಾರಿ ಎರಡುಗಂಟೆಯ ಹೊತ್ತು ಹೀಗೆ ಹಿಂದಕ್ಕೆ ನಡೆದು ಸ್ವಲ್ಪ ಮರೆಮರೆಯಾದ ಜಾಗಕ್ಕೆ ಬಂದನು. ಹುಲಿ ಇನ್ನೂ ನೋಡುತ್ತಲೇ ಇತ್ತು. ಇನ್ನೂ ಸ್ವಲ್ಪ ದೂರ ಹಾಗೆಯೇ ಹೋಗಿ ಹುಲಿಗೆ ಈಡು ಹೊಡೆಯುವೆನೆಂದು ಆಚಾರಿ ನಿರ್ಧರಿಸಿದನು. ಮತ್ತೆ ಸ್ವಲ್ಪ ಅಳುಕಿದನು. ಏಕೆಂದರೆ ಅವನು ಕೋವಿಗೆ ತುಂಬಿದ್ದುದು ಸಣ್ಣ ಚರೆಯ ಈಡು, ಕಾಡುಕೋಳಿಗೆಂದು. ಆ ಈಡು ಹುಲಿಯ ರೋಮಕ್ಕೂ ಸಾಲದು. ಸುಮ್ಮನೆ ಅದನ್ನು ಕೆಣಕಿ ಮೈಮೇಲೆ ಹಾಕಿಕೊಂಡರೆ ಅನಾಹುತವಾಗುವುದೆಂದು ಅವನು ಅಳುಕಿದ್ದ.

ನಡೆಯುತ್ತ ನಡೆಯುತ್ತ ಆಚಾರಿ ದೂರ ಹೋದನು. ಕಡೆಗೆ ಒಂದು ಬೆದರುಗುಂಡು ಹೊಡೆಯುವೆನೆಂದು ಬಗೆದು ನೋಡಿದನು. ಹುಲಿ ತನ್ನ ಮರಿಗಳೊಡನೆ ಮಾಯವಾಗಿತ್ತು. ಆಚಾರಿ ನಿಟ್ಟುಸಿರೆಳೆದನು. ಆದರೆ ಅವನಿಗೆ ಬಹಳ ವ್ಯಸನವಾಯಿತು, ಕೋವಿಗೆ ಗುಂಡು ಹಾಕಿರಲಿಲ್ಲವೆಂದು. ಚರೆಯಲ್ಲದೆ ಗುಂಡು ಹಾಕಿದ್ದರೆ ಅವನು ಹುಲಿ

ಯನ್ನು ಮೊದಲು ಎದುರುಗೊಂಡ ಸ್ಥಳದಲ್ಲಿಯೇ ಧೈರ್ಯವಾಗಿ ಸುಡುತ್ತಿದ್ದನು. ಹಿಂದೆ ಹಾಗೆಯೇ ಹುಲಿಗಳನ್ನು ಹೊಡೆದಿದ್ದನು. ಅವನ ಗುರಿ ಇಟ್ಟಲ್ಲಿಗೆ ತಪ್ಪದೆ ಬೀಳುತ್ತಿತ್ತು. ಹುಲಿಯ ಹಣೆಗೆ ಸರಿಯಾಗಿ ಗುಂಡು ತಗುಲಿಸಿದ್ದರೆ ಅದು ಅತ್ತಿತ್ತ ಅಲ್ಲಾಡದೆ ಬೀಳು ತ್ತಿತ್ತು. ಅವನಿಗೂ ಗೌಡರಿಂದ ದೊಡ್ಡ ಶಿಫಾರಸು ದೊರಕುತ್ತಿತ್ತು. ಒಳ್ಳೆಯ ಸಂದರ್ಭ ಕೈತಪ್ಪಿಹೋಯಿತಲ್ಲಾ ಎಂದು ಮರುಗಿ ಆಯಾಸ ಗೊಂಡು ಮನೆಯಕಡೆ ತಿರುಗಿದನು.

ಕಾಡುಕೋಳಿಯಂತೂ ಸಿಕ್ಕಲೇ ಇಲ್ಲ. ಅದಕ್ಕೆ ಬದಲಾಗಿ ಸಾಹಸಕಥೆಯೊಂದನ್ನು ತೆಗೆದುಕೊಂಡು ಹೋದನು. ಗೌಡರು ಅವನು ಬರುಗೈಯಲ್ಲಿ ಬಂದುದಕ್ಕಾಗಿ ಬಯ್ದರು. ಕಥೆಯನ್ನು ಕೇಳಿದ ಇತರರು ಅಸಡ್ಡೆಮಾಡಿದರು. ಯಾರೂ ಹೊಗಳಲಿಲ್ಲ. ಹುಲಿ ಯನ್ನು ಕೊಂದಿದ್ದರೆ ಎಲ್ಲಾ ಹೊಗಳುತ್ತಿದ್ದರು. ಇಂತಹ ಕಥೆ ಗಳನ್ನು ದಿನದಿನವೂ ಕೇಳುವ ಮಲೆನಾಡಿಗರಿಗೆ ಪುಟ್ಟಾಚಾರಿಯ ಸಾಹಸವು ಬಹು ಸಾಮಾನ್ಯವಾಗಿ ತೋರಿತು. ಆದರೆ ಅವನು ಮಾತ್ರ ತಾಳ್ಮೆ ತೋರದೆ, ಸ್ವಲ್ಪ ಅವಿವೇಕಮಾಡಿದ್ದರೆ ಊರಿನವರಿಗೆಲ್ಲ ಫಜೀತಿಗೆ ಬರುತ್ತಿತ್ತು. ಕೋರ್ಟು, ಪೋಲೀಸು ಮೊದಲಾದ ಭಯಂಕರ ವ್ಯಾಪಾರಗಳಿಗೆ ಸಿಗಬೇಕಾಗುತ್ತಿತ್ತು.

ಅವನು ಇತರರಿಗೆ ಆ ಕಥೆಯನ್ನು ಹೇಳುತ್ತಿದ್ದಾಗ ಹುಡುಗ ನಾಗಿದ್ದ ನಾನೂ ಕೇಳಿದ್ದೆ. ಈಗ ಅವನು ಸತ್ತು ಹತ್ತು ಹನ್ನೆರಡು ವರ್ಷಗಳಾಯಿತು. ಆದರೂ ಅವನೂ ಅವನ ಕಥೆಯೂ ನನ್ನ ನೆನಪಿ ನಿಂದ ಅಳಿಸಿಹೋಗಿಲ್ಲ. ತಾನು ಸತ್ತು ಹತ್ತುಹನ್ನೆರಡು ವರ್ಷ ಗಳಾದ ಮೇಲೆ ತನ್ನ ಅನೇಕ ಸಾಹಸಗಳಲ್ಲಿ ಒಂದಾದ ಈ ಸಾಹಸವು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಸಿದ್ಧಿಗೆ ಬರುವುದೆಂದು ಪುಟ್ಟಾಚಾರಿಗೆ ಆಗಲೇ ಗೊತ್ತಿದ್ದರೆ! ಸ್ವಲ್ಪ ಹೆಮ್ಮೆಯಿಂದ ಸಾಯುತ್ತಿದ್ದನು ಎಂಬಿರಾ? ಇಲ್ಲ, ಎಂದಿಗೂ ಇಲ್ಲ. ಮಹಾತ್ಮರಲ್ಲಿರುವ ಯಶೋಭಿ ಲಾಷೆ ಎಂಬ ಕಟ್ಟಕಡೆಯ ದೌರ್ಬಲ್ಯಪಿಶಾಚವು ಅವನಿಗೆ ಹಿಡಿದಿರ

ಲಿಲ್ಲ. ಯಾರೂ ಅರಿಯದ ವೀರರ ಗುಂಪಿಗೆ ಸೇರಿದವನವನು. ಮೌನ ವಾಗಿ ಬಂದು ಮೌನವಾಗಿ ಹೋಗುವರವರು. ಹರತಾಳ ಮಾಡ ಬೇಕೆಂಬ ವಿದ್ಯಾರ್ಥಿಗಳಿಗೆ ಅಂಥವರಿಂದ ಸ್ವಲ್ಪವೂ ಪ್ರಯೋಜನವಿಲ್ಲ.

---

# ಮನೆಯ ಶಾಲೆಯ ಐಗಳ ಮಾಲೆ

ನಾವು ತೀರ್ಥಹಳ್ಳಿಯ "ಸರ್ಕಾರೀ ಇಸ್ಕೂಲಿ"ಗೆ ಸೇರುವುದಕ್ಕಿಂತ ಮುಂಚೆ ಮನೆ ಮಹಡಿಯ ಕಾಲೇಜಿನಲ್ಲಿಯೇ ಪಾಂಡಿತ್ಯಸಂಪಾದನೆ ಮಾಡುತ್ತಿದ್ದುದು. ನಾವು ಅಂದರೆ ಯಾರು ? ಸುಬ್ಬು, ಕಾಡು, ಓಬು, ತಿಮ್ಮು, ನಾಸು. ಇವು ಮನೆಯ ಮುದ್ದಿನ ಹೆಸರುಗಳು. ಇವೇ ಸಂಪೂರ್ಣ ವಿಕಾಸಹೊಂದಿದರೆ, ಅಂದರೆ ವಸಂತಋತು ಹಿಡಿದುಕೊಂಡರೆ, ಸುಬ್ಬಯ್ಯ, ಕಾಡಣ್ಣ, ಓಬಯ್ಯ, ತಿಮ್ಮಯ್ಯ ಎಂದಾಗುವುವು. 'ನಾಸು' ಮಾತ್ರ 'ನಾಸಯ್ಯ'ವಾಗುವುದಿಲ್ಲ. ಆದರೆ ಈ ಅರಳಿದ ದೊಡ್ಡ ಹೆಸರುಗಳು ಸ್ಕೂಲು ರಿಜಿಸ್ಟರುಗಳಿಗೂ, ವಿವಾಹ ಪತ್ರಿಕೆಗಳಿಗೂ, ಜೈಲುವಾರಂಟುಗಳಿಗೂ ಯೋಗ್ಯವಾದುವೇ ಹೊರತು ಬಡಪ್ರಬಂಧಗಳಿಗೆ ಯೋಗ್ಯವಾದುವಲ್ಲ ಎಂದು ನನ್ನ (ಜೀವಮಾನದಲ್ಲಿ ನನಗಿರುವ ಒಂದೇ !) ಮಹಾಭಿಪ್ರಾಯ.

ನಮ್ಮ ಮೊದಲನೆಯ ಐಗಳ ನಾಮಧೇಯವು ನನಗೆ ಮರೆತು ಹೋಗಿದೆ. ಮನಸ್ಸಿನ ದಿಗಂತದಲ್ಲಿ ಸ್ಮೃತಿ ಎಷ್ಟು ಅಲೆದಲೆದು ಅರಸಿದರೂ ಅವರ ಹೆಸರೇ ಅದಕ್ಕೆ ಸಿಕ್ಕುವುದಿಲ್ಲ. ಅಷ್ಟು ಪ್ರಾಮುಖ್ಯವಾದ ಹೆಸರು! ಅಂದರೆ ಇಷ್ಟುಮಾತ್ರ ಚೆನ್ನಾಗಿ ಜ್ಞಾಪಕವಿದೆ. ಅವರು ಪಾತಾಳ ಲೋಕದವರು; ಅಂದರೆ ಕನ್ನಡಜಿಲ್ಲೆಯಿಂದ ಬಂದವರು ಎಂದರ್ಥ. ನಮ್ಮ ಕಡೆ ಕನ್ನಡ ಜಿಲ್ಲೆಯನ್ನು ಪಾತಾಳಲೋಕವೆಂದೂ, ಅಲ್ಲಿಂದ ಘಟ್ಟಹತ್ತಿ ಬರುವವರನ್ನೆಲ್ಲಾ ಪಾತಾಳ ಲೋಕದವರೆಂದೂ ಕರೆಯುವ ವಾಡಿಕೆ. ಈ ಹೆಸರು ಅವರಿಗೇಕೆ ಬಂತೆಂದರೆ, ಕನ್ನಡ ಜಿಲ್ಲೆಯಿಂದ ಕೂಲಿಯಾಳುಗಳನ್ನು ಮಲೆನಾಡಿಗೆ ಕರೆತರುವ ಸೇರೇಗಾರ (ಮೇಸ್ತ್ರಿ)ರು ಪ್ರಾಮಾಣಿಕತೆಯ ಪರಮಾವಧಿಯನ್ನು ಮುಟ್ಟಿದ ಆದರ್ಶಪ್ರಾಯರು! ಮಲೆನಾಡಿನ ರೈತರು ಅವರಿಗೆ ಮರುವರ್ಷ ಕೂಲಿಯಾಳುಗಳನ್ನು ತರಲು ಮುಂಗಡವಾಗಿ ಕೊಡುವ

ಹಣಕ್ಕೆ ಯಾವಾಗಲೂ ಲೋಪವೆ! ಆದ್ದರಿಂದಲೆ ರೈತರು ಕನ್ನಡ ಜಿಲ್ಲೆಯವರನ್ನು ಹೊಸಗಾರರೆನ್ನುವ ಬದಲು ಪಾತಾಳಲೋಕದವರು ಎನ್ನುವುದು.

ನಮ್ಮ ಐಗಳು ವಿದ್ಯಾವಂತರಾಗಿದ್ದರಂತೆ. ಕಾಗದ ಬರೆಯು ವುದಕ್ಕೆ ಕೂಡ ಬರುತ್ತಿತ್ತಂತೆ. ಅವರು ಯಾವಾಗಲೂ ಉಪ್ಪರಿಗೆ ಮೇಲಿನ ಮಳಿಗೆಯೊಳಗೆ ಮಲಗಿಯೇ ಇರುತ್ತಿದ್ದರು. ಈಗಾದರೆ ಶುದ್ಧ ಸೋಮಾರಿ ಎಂದು ಬಿಡುತ್ತಿದ್ದೆವು. ಆಗ ನಮಗೆಲ್ಲಾ ಅವರನ್ನು ಕಂಡರೆ ತುಂಬಾ 'ಗೌರವ'. ಹುಲಿಕಂಡಾಗ ಗೋವಿಗಿರುವ 'ಗೌರವ'. ಅದೂ ಅಲ್ಲದೆ ಜ್ಞಾನದ ಪರಮಾವಧಿಯನ್ನು ಸೇರಿದ ನಮ್ಮ ಐಗಳಿಗೆ ಮಲಗುವುದೇ ಕರ್ತವ್ಯ ಎಂದು ಭಾವಿಸಿದ್ದ ನಮಗೆ ಅವರ ನಡತೆಯಲ್ಲಿ ಕುಂದೇನೂ ಕಂಡುಬರಲಿಲ್ಲ. ಅದೂ ಅಲ್ಲದೆ ಅವರ ಈ ತೆರನಾದ ದುರಭ್ಯಾಸ, ತಪ್ಪಾಯ್ತು! ಒಳ್ಳೆಯ ಅಭ್ಯಾಸದಿಂದ ನಮಗೂ ಸ್ವಲ್ಪ ಉಪಯೋಗವಾಗುತ್ತಿತ್ತು.

ಉಪಯೋಗವೇನೂ ದೊಡ್ಡದಲ್ಲ. ಆದರೂ ಮಹತ್ವಾದದ್ದು. ಮಳಿಗೆಯ ಈಚೆಗೆ ನಾವು ಬರೆಯುವ ಶಾಲೆ; ನಮ್ಮ ಐಗಳ ಉಪ ನ್ಯಾಸ ಮಂದಿರ! ಆಗೇನು ಈಗಿನ ಹಾಗೆ ಸ್ಲೇಟು ಕಾಗದ ಮುಂ ತಾದ ಪರದೇಶದ ವಸ್ತುಗಳ ಮೇಲೆ ಬರೆಯುವ "ಕೆಟ್ಟ ಚಾಳಿ" ಇರ ಲಿಲ್ಲ. ದೇಶಾಭಿಮಾನ ಉಕ್ಕಿ ಹರಿಯುವ ಕಾಲ. ಆದ್ದರಿಂದಲೇ ನಾವೂ ಕೂಡ ಸ್ವದೇಶದ ವಸ್ತುವಾದ ಮರಳ ಮೇಲೆಯೇ ಅಕ್ಷರಾ ಭ್ಯಾಸ ಮಾಡಿದೆವು. (ಜತೆಗೆ ಗುರುನಿಂದೆ ಮಾಡುವುದನ್ನೂ ಸ್ವಲ್ಪ ಅಭ್ಯಾಸ ಮಾಡಿದ್ದೆವ.)

ಒಬ್ಬೊಬ್ಬರಿಗೆ ಒಂದೊಂದು ಕಡೆ ಮರಳಿನ ಸ್ಲೇಟು! ನಮ್ಮ ಐಗಳು ಅ, ಆ, ಇ, ಈ, ಉ, ಊ, ಬರೆದುಕೊಟ್ಟು ತಿದ್ದುವಾಗ ಕೈ ಬೆರಳುಗಳನ್ನು ಜೋಡಿಸುವ ರೀತಿಯನ್ನು ಕಾರ್ಯತಃ ತೋರಿಸಿ ಕೊಟ್ಟು, ಮರಳ ಮೇಲಿಟ್ಟು, ಅದುಮಿ, ತಿಕ್ಕಿ, ಕಣ್ಣೀರುಬರಿಸಿ, ಎರಡು ಪೆಟ್ಟು ಕೊಟ್ಟು, ಚೆನ್ನಾಗಿ ಕೈತಿದ್ದಲು ಅಪ್ಪಣೆಕೊಟ್ಟು, ಮಳಿಗೆಗೆ ಹೋಗಿ ಬಾಗಿಲು ಹಾಕಿಕೊಂಡು ಮಲಗುತ್ತಿದ್ದರು. ಇಷ್ಟೆಲ್ಲ

ವನ್ನೂ ಅರೆಸಿದ್ದೆಯಲ್ಲಿಯೇ ಮಾಡುತ್ತಿದ್ದರೋ ಏನೋ ಎಂದು ಈಗ ಸಂಶಯವಾಗುತ್ತದೆ.

ಒಂದು ದಿವಸ ಬೆಳಿಗ್ಗೆ, ಐಗಳು ಅಕ್ಷರಾಭ್ಯಾಸದ ಶಿಕ್ಷೆಗಳನ್ನೆಲ್ಲಾ ವಿಧಿಸಿ ಎಂದಿನಂತೆ ಕೋಣೆಗೆ ಹೋಗಿ ಮಲಗಿದರು. ಕಣ್ಣೀರು ಕರೆಯುತ್ತಾ, ಕೂದಲು ಕೆರೆಯುತ್ತಾ, ಮರಳಲ್ಲಿ ಬರೆಯುತ್ತಾ, ಬರೆದಿದ್ದನ್ನು ಮರೆಯುತ್ತಾ ಕುಳಿತಿದ್ದ ಸುಬ್ಬು– ಅವನೇ ನಮ್ಮ ಮುಖಂಡ– ನಮ್ಮ ಕಡೆ ನೋಡಿ, ಕಣ್ಣುಮಿಸುಕಿ ಸನ್ನೆಮಾಡಿದನು. ಸನ್ನೆಯ ಅರ್ಥವು ಎಲ್ಲರಿಗೂ ಕರತಲಾಮಲಕವಾಗಿದ್ದಿತು. ನಾನು ಮೆಲ್ಲಗೆ ತುದಿಗಾಲಿನಲ್ಲಿ ಶಬ್ದ ಮಾಡದಂತೆ ಎದ್ದುಹೋಗಿ ಮಳಿಗೆ ಬಾಗಿಲ ತೂತಿನಲ್ಲಿ ಒಳಗೆ ಇಣಿಕಿನೋಡಿದೆ. ಐಗಳು ಸಪ್ತಮಲೋಕದಲ್ಲಿ ಪಾಠ ಹೇಳುತ್ತಿದ್ದರು. ಗೊರಕೆ ಚೆನ್ನಾಗಿ ಕೇಳಿಸಿತು. ಹಿಂತಿರುಗಿ ಸನ್ನೆ ಮಾಡಿದೆ. ಎಲ್ಲರೂ ಮೆಲ್ಲಗೆ ಏಣಿಗಂಡಿ ಸೇರಿದೆವು. ಆ ಹಾಳು ಏಣಿ ಮೆಟ್ಟಲುಗಳು ಇಳಿಯುವಾಗ ಗಡಬಡ ಶಬ್ದಮಾಡುತ್ತಿದ್ದುವು! ಒಬ್ಬೊಬ್ಬರಾಗಿ ಮೆಟ್ಟಲುಗಳು ಕಿರಿಚದ ರೀತಿಯಲ್ಲಿ ಇಳಿದೆವು. ಓಬು ಇಳಿಯುವಾಗ ಮಾತ್ರ ಒಂದು ಮೆಟ್ಟಲು ಶಬ್ದಮಾಡಿತು. ಆದರೆ ಐಗಳು ದೇವರ ಕೃಪೆಯಿಂದ ಗಾಢನಿದ್ದೆಯಲ್ಲಿದ್ದರು. ಎಲ್ಲಾ ಇಳಿದ ಮೇಲೆ ಬಚ್ಚಿಟ್ಟಿದ್ದ 'ನಾಗರ ಬಕ್ಕೆ' ಹಲಸಿನ ಹಣ್ಣು ಪುರಸ್ಕೈಸಲೋಸ್ಕರ ಗಾಡಿಕೊಟ್ಟಿಗೆಗೆ ದಾಳಿಯಿಟ್ಟೆವು

ನಾವು ಎರಡನೆ ತರಗತಿಗೆ ಬರುವಷ್ಟರಲ್ಲಿಯೇ ಸುಮಾರು ಹತ್ತುಹದಿನೈದು ಜನ ಐಗಳ ಗುಂಪು ಬಂದುಹೋಗಿತ್ತು! ನಮ್ಮ ಊಪ್ಪರಿಗೆ ಕಾಲೇಜೇನು ಸಾಮಾನ್ಯವಾದುದೇ? ಅದರ ಪ್ರತಿಭಾಶಾಲಿಗಳಾದ ವಿದ್ಯಾರ್ಥಿಗಳು, ನಾವೇನು ಪ್ರಾಕೃತರೇ? ಮೊದಲನೆ ಐಗಳು ಓಡಿಹೋದ ಮೇಲೆ ಮತ್ತೊಬ್ಬರು ಬಂದರು. ಸಾಧಾರಣವಾಗಿ ಐಗಳೆಲ್ಲಾ ಹೇಳದೆ ಕೇಳದೆ ಓಡಿಹೋಗುತ್ತಿದ್ದುದೇ ವಾಡಿಕೆ. ಎರಡನೆ ಐಗಳ ಹೆಸರು ಮಂಜಪ್ಪ ಐಗಳು ಅಂತ. ಸ್ವಲ್ಪ ಮುದುಕರು. ಅಂದರೆ ದೇವರ ದಯೆಯಿಂದ ಇನ್ನೂ ಅರವತ್ತು ವರ್ಷ ಆಗಿರಲಿಲ್ಲ. ಏಕೆಂದರೆ "ಅರವತ್ತು ವರ್ಷಕ್ಕೆ ಅರೆಮರುಳು" ಎಂಬ ಗಾದೆಯು ಬಹು ಜನರ

ವಿಷಯದಲ್ಲಿ ಸುಳ್ಳಾಗುವುದಿಲ್ಲ. ಮಂಜಪ್ಪ ಐಗಳು ನಮ್ಮ ಊಪ್ಪರಿಗೆ ಕಾಲೇಜಿಗೆ ಪ್ರೊಫೆಸರಾಗಿ ಬಂದವರು ಪುನಃ ಊರು ಮುಖ ನೋಡಲೆ ಇಲ್ಲ. ನಮ್ಮ ಮನೆಯಲ್ಲಿಯೆ ರೇಷ್ಮೆ ಕಾಯಿಲೆಯಾಗಿ ಸತ್ತರು. ಅವರಿಗೆ ಕಾಯಿಲೆಯಾಗಿದ್ದಾಗ ನಮಗೆಲ್ಲಾ ರಜ. ಕಾಯಿಲೆ ಎಲ್ಲಿ ಬೇಗ ಗುಣವಾಗಿಬಿಡುವುದೋ ಎಂದು ನಮಗೆಲ್ಲಾ ಒಳಗೊಳಗೆ ಭಯ! ಇಂಥಾ ದುರಾಲೋಚನೆಯು ಬಹಳ ಪಾಪಕರವೆಂದು ಈಗ ತೋರುತ್ತದೆ. ಆಗ ಪಾಪದ ಆಲೋಚನೆಯೇ ತಲೆದೋರಿರಲಿಲ್ಲ. ನಮಗೆ ಮಂಜಪ್ಪ ಐಗಳ ಮೇಲೆ ಹೊಟ್ಟೆಕಿಚ್ಚು ಇರಲಿಲ್ಲ. ನಮಗೆ ಬೇಕಾಗಿದ್ದುದು ರಜ. ಐಗಳಿದ್ದರೆ ಸಜ, ಐಗಳಿದ್ದರೆ ರಜ! ಕಾಯಿಲೆ ಬಿದ್ದು ಹದಿನೈದು ದಿನಗಳೊಳಗಾಗಿ ಐಗಳು ಎದ್ದೇ ಬಿಟ್ಟರು. ಅವರ ಮರಣದಿಂದ ನಮಗೆಲ್ಲ ದುಃಖವಾಗದೆ ಇರಲಿಲ್ಲ.

ಒಂದು ದಿನ ಸಾಯಂಕಾಲ. ನಾವೆಲ್ಲಾ ಕಣದಲ್ಲಿ ಲಗ್ಗೆ ಆಟ ಆಡುತ್ತಿದ್ದೆವು. ನಮ್ಮ ತಂದೆ ಎಲ್ಲಿಗೋ ಹೊರಗೆ ಹೋಗಿದ್ದವರು ಬಂದರು. ಅವರ ಜತೆಗೆ ಇನ್ನೊಬ್ಬ ಹೊಸಬರನ್ನು ತಂದರು. ಯಾರೇ ಆಗಲಿ ಹೊಸಬರು ಮನೆಗೆ ಬಂದರೆ ನಮಗೆಲ್ಲಾ ದಿಗಿಲು! ಮತ್ತೊಬ್ಬ ಐಗಳು ಬಂದರೋ ಏನೋ ಎಂದು! ಒಂದು ದಿನ ಮನೆಗೆ ಒಬ್ಬ ಹೊಸ ಕೂಲಿಯಾಳು ಬಂದನು. ಅವನನ್ನು ಕಂಡು ತಿಮ್ಮು, ಅವನೇ ಐಗಳು ಎಂದು ಭಾವಿಸಿ, (ಐಗಳಿಗೂ ಆಳುಗಳಿಗೂ ಹೆಚ್ಚೇನೂ ಭೇದ ವಿರುತ್ತಿರಲಿಲ್ಲ) ಒಂದು ಕತ್ತಲೆ ಕೋಣೆಯೊಳಗೆ ಬಾಗಿಲು ಹಾಕಿ ಕೊಂಡು ಅಡಗಿಬಿಟ್ಟಿದ್ದನು. ಅವನನ್ನು ಹುಡುಕುವುದೇ ಕಷ್ಟ ವಾಯ್ತು!

ಲಗ್ಗೆ ಆಟ ಬಹಳ ಜೋರಿಗೇರಿದ್ದಿತು. ಆಟದ ಯೋಚನೆ ಹೊರತು ಬೇರೆ ಯಾವುದೂ ನಮ್ಮ ತಲೆಯಲ್ಲಿರಲಿಲ್ಲ. ನಮ್ಮ ಮನಸ್ಸಿಗೆ ಲಗ್ಗೆ ಆಟ ಒಂದೇ ಜಗತ್ತಿನ ವ್ಯಾಪಾರವೆಂದು ತೋರಿದ್ದಿತು. ಅಷ್ಟು ಹೊತ್ತಿಗೆ ಹೊಸ ಐಗಳು ಬಂದಿದ್ದಾರೆ ಎಂಬ ಭೀಕರವಾರ್ತೆಯು ಬಂದು ಮುಟ್ಟಿತು. ನಮ್ಮ ಎದೆಗೆ ಸಿಡಿಲು ಬಡಿದಂತಾಯಿತು. ಕ್ಷಣ ಮಾತ್ರದಲ್ಲಿ ಅದುವರೆಗೆ ನಾವಿದ್ದ ಲೀಲಾಪ್ರಪಂಚವು ಒಡೆದು ಚೂರಾಗಿ

ಪ್ರಳಯದಲ್ಲಿ ಮುಳುಗಿಹೋಯಿತು! ಇದುವರೆಗೆ ರಜ; ನಾಳೆಯಿಂದ ಸಜ, ಉಪ್ಪರಿಗೆ ಜೈಲಿನಲ್ಲಿ! ತಿಮ್ಮುವು ಬಿಕ್ಕಿ ಬಿಕ್ಕಿ ಅತ್ತೇಬಿಟ್ಟನು. ಆಗ ನಮಗಾದ ದುಃಖವನ್ನು ಅಳೆಯುವವರಾರು? ಉಲ್ಲಾಸದಿಂದ ರಂಜಿಸುತ್ತಿದ್ದ ಮುಖಮಂಡಲಗಳು ಕಳೆಯಿಲ್ಲದಾಗಿ ಕಪ್ಪಗಾದುವು. ನಮ್ಮ ಗತಿ ಮುಗಿಯಿತೆಂದು ತಿಳಿದು ಹೊಸ ಐಗಳ 'ಹಾಳುಮೋರೆ' ನೋಡಲು ಮನೆಯೊಳಗೆ ಮೆಲ್ಲಗೆ ಜಾರಿದೆವು.

ಹೊಸ ಐಗಳ ಹೆಸರು ನಾಗಪ್ಪಶೆಟ್ಟಿ. ಅವರೂರು ಉಡುಪಿಯಂತೆ. ನಮ್ಮ ತಂದೆ ಅಲ್ಲಿಗೆ ಹೋದಾಗ ನಾಗಪ್ಪಶೆಟ್ಟರ 'ಸುಖನಿವಾಸ'ದಲ್ಲಿಯೇ ಊಟ ತಿಂಡಿ ಎಲ್ಲಾ ಮಾಡಿದ್ದರಂತೆ. ಈಗ ಹೋಟಲು ಪಾಪರಾಗಿ, ಐಗಳ ಕೆಲಸಕ್ಕೆ ಬಂದಿದ್ದರು! ನಾಗಪ್ಪಶೆಟ್ಟರ ಐಗಳತನ ಐದು ದಿವಸ ನಡೆಯಿತು. ಆರನೆಯ ದಿನ ಭಾನುವಾರ ಸಂತೆಗೆ ಹೋಗಿಬರುತ್ತೇನೆಂದು ಹೇಳಿ ಕೊಪ್ಪಕ್ಕೆ ಹೋದರು. ಹೋದವರು ಬರದಿದ್ದರೆ ಸಾಕಲ್ಲಾ ಎಂದು ನಾವೆಲ್ಲಾ ತೋಟದಾಚೆ ಭೂತನಿಗೆ ಹೇಳಿಕೊಂಡು, ಬಾಳೆ ತೋಟಕ್ಕೆ ಹೋಗಿ ಚೆನ್ನಾಗಿ ಬೆಳೆದ ಒಂದು ಕರಿಬಾಳೆ ಗೊನೆಗೆ ಎಳೆ (ಮುಡುಪು) ಕಟ್ಟಿದೆವು.

ಸೋಮವಾರವಾಯಿತು. ಐಗಳು ಬರಲೇ ಇಲ್ಲ. ಮಂಗಳವಾರವೂ ಕಳೆಯಿತು. ಐಗಳ ಮೋರೆಯೇ ಇಲ್ಲ. ಬುಧವಾರವೂ ಆಯಿತು; ಐಗಳು ಓಡಿಹೋದರೆಂದು ನಿರ್ಣಯವೂ ಆಯಿತು. ನಮ್ಮ ಹಾರೈಕೆಯೂ ಕೈಗೂಡಿತು. ಐಗಳು ಓಡಿಹೋದ ಸಮಾಚಾರವನ್ನು ಕೇಳಿ ನಾವೆಲ್ಲಾ ಹಿಗ್ಗಿ ಹಿಗ್ಗಿ ಕುಣಿದೆವು. ಮತ್ತೆ ಎಂದಿನಂತೆ ಉಲ್ಲಾಸದಿಂದ ಜೀವಿಸತೊಡಗಿದೆವು.

ಆದರೆ ಭೂತನಿಗೆ ಕಟ್ಟಿದ ಮುಡುಪನ್ನು ಮಾತ್ರ ಸಲ್ಲಿಸಲೇ ಇಲ್ಲ. ಸುಬ್ಬು, ಚೆನ್ನಾಗಿ ಬೆಳೆದ ಕರಿಬಾಳೆ ಗೊನೆಯನ್ನು ನೋಡಿ "ಅಯ್ಯೊ, ಹೋಗ್ರೋ, ಭೂತಕ್ಕೆ ಯಾರು ಕೊಡ್ತಾರೆ, ಇಷ್ಟು ಚೆನ್ನಾಗಿ ಬೆಳೆದ ಗೊನೆಯನ್ನು? ಇದನ್ನು ನಾವೇ ಲಗಾಯಿಸಿಬಿಡೋಣ ಹಣ್ಣುಮಾಡಿಕೊಂಡು. ಭೂತಕ್ಕೆ ಬೇಕಾದರೆ ಇನ್ನೊಂದು ಗೊನೆಗೆ ಎಳೆಕಟ್ಟಿದರಾಯಿತು" ಎಂದನು. ತೋಟದಲ್ಲಿದ್ದ ಇನ್ನೊಂದು ಚಿಗುರು

ಾಳಿಗೊನೆಗೆ ಎಳೆ ಕಟ್ಟಿದೆವು. ಎಳೆ ಕಟ್ಟುವುದೇನು ಬಹು ಸುಲಭ. ಾಳೆಯು ಮರದಿಂದ ಒಣಗಿ ಜೋಲು ಬಿದ್ದ ಎಲೆಗಳನ್ನು ಒಟ್ಟುಗೂಡಿಸಿ ುರಕ್ಕೆ ದಟ್ಟಿ ಸುತ್ತಿದರಾಯಿತು! ಹೀಗೆಯೆ ಮರದಿಂದ ಮರಕ್ಕೆ ಟ್ಟಿ ಬಿಗಿದೆವೇ ಹೊರತು, ಭೂತಕ್ಕೆ ಹರಕೆ ಒಪ್ಪಿಸಲೇ ಇಲ್ಲ. ಕರು ಾಶಾಲಿಯಾದ ಭೂತವು ಹುಡುಗರು ಎಂದು ಸುಮ್ಮನಾಯಿತೆಂದು ೋರುತ್ತದೆ. ಅಥವಾ ಸುಬ್ಬು ಹೇಳಿದಹಾಗೆ ಕೈಯಲ್ಲಾಗಲಿಲ್ಲವೋ ನೊ, ಯಾರಿಗೆ ಗೊತ್ತು?

ಮುಮ್ಮಡಿ ಐಗಳು ಓಡಿಹೋಗಿ ನಾಲ್ಮಡಿ ಐಗಳು ಬರುವಷ್ಟ ಲ್ಲಿ ಮೂರು ತಿಂಗಳಾದುವು. ಈ ಅಂತರದಲ್ಲಿ ನಮ್ಮ 'ಅಟಮಟ' ತಿಯಾಯಿತು. ಮನೆಯಲ್ಲಿ ನಮ್ಮ ಕಿರುಕಳ ತಡೆಯಲಾರದೆ ೋದರು. ನಮ್ಮ ಲೂಟಿಯೂ ಪುಂಡಾಟವೂ ಮಿತಿಮೀರಿದುವು.

ಸುಬ್ಬು, ಕಾಡು ಇಬ್ಬರಿಗೂ ನಶ್ಯ ಹಾಕುವ ಅಭ್ಯಾಸ. ದಿನವೂ ಜ್ಜಯ್ಯನ ಡಬ್ಬಿಯಿಂದ ನಶ್ಯ ಕದಿಯುತ್ತಿದ್ದರು. ನಮ್ಮ ಅಜ್ಜಯ್ಯ ಾಕುತ್ತಿದ್ದುದು ಮಡ್ಡಿ ನಶ್ಯ ಅಥವಾ ಉಂಡೆ ನಶ್ಯ. ಮಂಗಳೂರು, ುದ್ರಾಸು ಈ ಊರುಗಳ ಪುಡಿ ನಶ್ಯವಲ್ಲ. ಅವರು ಸುಣ್ಣ, ಬೆಣ್ಣೆ ಲ್ಲಾ ಹಾಕಿ, ತಿಕ್ಕಿ, ನಶ್ಯದ 'ಚುಟ್ಟ' (ಚುಟಿಗೆ)ಗಳನ್ನು ಸಿದ್ಧಪಡಿಸಿ ಂತದ ಡಬ್ಬಿಯಲ್ಲಿ ಇಟ್ಟು ಹೋಗುತ್ತಿದ್ದರು. ಆಗ ಇವರು ಮೆಲ್ಲಗೆ ೋಗಿ ಡಬ್ಬಿಯಿಂದ ಎರಡು ಮೂರು 'ಚುಟ್ಟ'ಗಳನ್ನು ಹಾರಿಸಿ ಡುತ್ತಿದ್ದರು. ಅಜ್ಜಯ್ಯ ಮುದುಕರು. ಅಷ್ಟೇನು ಪರೀಕ್ಷೆ ಾಡಿ, ಲೆಖ್ಖಮಾಡಿ ನೋಡುತ್ತಿರಲಿಲ್ಲ. ಆದ್ದರಿಂದಲೇ ಕಳ್ಳರೂ ಕ್ಕಿ ಬೀಳುತ್ತಿರಲಿಲ್ಲ.

ಒಂದು ದಿವಸ ನಮಗೆ ಯಾರಿಗೂ ತಿಳಿಯದಂತೆ ಅಜ್ಜಯ್ಯನ ಶ್ಯದ ಡಬ್ಬಿಯನ್ನೆ ಮಡ್ಡಿ ನಶ್ಯ ಸಮೇತ ಎಗರಿಸಿಬಿಟ್ಟರು. ಗುಲ್ಲು ಬ್ಬಿತು. ನಮ್ಮನ್ನೆಲ್ಲಾ ಕರೆದು ವಿಚಾರಣೆ ಮಾಡಿದರು. ನಾವೆಲ್ಲಾ "ನಮಗೆ ಗೊತ್ತೇ ಇಲ್ಲ'' ಎಂದೆವು. ಕಾಡು ಸುಬ್ಬ ಇಬ್ಬರೂ "ದೇವರಾಣೆಗೂ ತೆಗೆಯಲಿಲ್ಲ'' ಎಂದುಬಿಟ್ಟರು. ಯಾರೋ ಆಳು ಗಳು ಕದ್ದುಕೊಂಡಿರಬಹುದು ಎಂದು ನಮ್ಮನ್ನು ಪೋಲೀಸು ವಿಚಾ

ಕಣೆಗೆ (ಅಂದರೆ ಹೊಡೆದು ಬಡಿದು ವಿಚಾರಿಸುವುದು) ಗುರಿಮಾಡಲಿಲ್ಲ. ಸುಬ್ಬು ಕಾಡು ಇಬ್ಬರೂ ಮನದಲ್ಲಿಯೆ ಗೆದ್ದೆವಲ್ಲಾ ಎಂದು ಹಿಗ್ಗಿದರು. ಆಮೇಲೆ ನಮಗೆ ನಿಜಸ್ಥಿತಿಯನ್ನು ಗುಟ್ಟಾಗಿ ತಿಳಿಸಿದರು. ನಶ್ಯದ ಡಬ್ಬಿಯನ್ನು ತೋಟದ ಬಾಳೆಗಡ್ಡೆಯ ಬುಡದಲ್ಲಿ ಹುಗಿದು ಇಟ್ಟಿದ್ದರು. ಬೇಕಾದಾಗ ಯಾರೂ ಕಾಣದಂತೆ ಹೋಗಿ ನಶ್ಯ ತರುತ್ತಿದ್ದರು. ನಾನು ಸುಬ್ಬುವನ್ನು ಕುರಿತು “ಅಲ್ಲೋ ಸುಬ್ಬು, ‘ದೇವರಾಣೆಗೂ ಕದಿಯಲಿಲ್ಲ’ ಎಂದೆಯಲ್ಲೋ !” ಎಂದೆನು. ಅದಕ್ಕೆ ಅವನು ಎಂದಿನಂತೆ ನಾಸ್ತಿಕನಾಗಿ “ಹೋಗೊ, ದೇವರಂತೆ, ಆಣೆಯಂತೆ. ಅದರಲ್ಲೆಲ್ಲಾ ಏನಿದೆಯೊ ?” ಎಂದನು.

ಮತ್ತೊಂದು ದಿವಸ ಓಬು, ಒಳಗಿನ ಉಪ್ಪರಿಗೆಯಲ್ಲಿ ನಮಗೆಲ್ಲರಿಗೂ ಎಂದು, ಬೆಲ್ಲ ಕದಿಯುತ್ತಿದ್ದವನು ಸಿಕ್ಕಿಬಿದ್ದ. ಆದರೆ ನಮ್ಮ ಪುಣ್ಯಾವಶದಿಂದಲೋ, ಅಥವಾ ದೇವರ ದಯದಿಂದಲೋ, ಅವನು ಆ ಪುಕಾರಿಗೆ ನಮ್ಮನ್ನೆಲ್ಲಾ ಸಿಕ್ಕಿಸಲಿಲ್ಲ. ಬೆನ್ನಮೇಲೆ ಬಂದಷ್ಟು ಕಡುಬು ಬಿದ್ದುವು. ಎಲ್ಲವನ್ನೂ ವೀರನಂತೆ ಸಹಿಸಿಯೇ ಬಿಟ್ಟ !

ಇನ್ನೊಂದು ದಿವಸ ನಾನು ಹಲಸಿನ ಮರಹತ್ತಿ ಕಾಲುತಪ್ಪಿ ಬಿದ್ದು ಮುಖ ಮೋರೆ ಒಡೆದುಕೊಂಡೆ. ಅದು ನನ್ನ ಅಜಾಗರೂಕತೆಯಿಂದ ಆಗಲಿಲ್ಲ. ಆ ದೆವ್ವ ಹಲಸಿನ ಕಾಯಿಯಿಂದ ಆಗಿದ್ದು. ತೊಟ್ಟು ಮುರಿಯಲು ನನ್ನ ಕಡೆಗೇ ಉರುಳಿ ಮೈಮೇಲೆ ಬಿದ್ದು ಬಿಟ್ಟಿತು. ಭಾರ ತಡೆಯಲಾರದೆ ಕೆಳಗೆ ಬಿದ್ದೆ, ಹಲಸಿನ ಕಾಯಿಯೂ ನನ್ನನ್ನು ಹಿಂಬಾಲಿಸಿತು. ಆದರೆ ಮೈಮೇಲೆ ಬೀಳಲಿಲ್ಲ. ಬಿದ್ದಿದ್ದರೆ ನನ್ನ ಗತಿ ಮುಗಿಯುತ್ತಿತ್ತು.

ಹೀಗಾಗಿ ನಮ್ಮ ಹಾವಳಿ ತಡೆಯಲಾರದೆ, ಹುಡುಕಿ ಹುಡುಕಿ ಒಬ್ಬ ಐಗಳನ್ನು ತಂದರು. ಇವರು ಸ್ವಲ್ಪ ಸುಧಾರಿಸಿದವರಾದ್ದರಿಂದ ನಮಗೆಲ್ಲಾ “ಸಿಲೇಟು” “ಸಿಲೇಟು ಕಡ್ಡಿ”ಗಳ ದರ್ಶನ ಮಾಡಿಸಿದರು. ಜತೆಗೆ ನಾವು ಎಂದೂ ಕಾಣದ ಬೀಡಿಗಳ ದರ್ಶನವನ್ನೂ ಮಾಡಿಸಿದರು ! ಅವರು ಸೇದಿ ಬಿಸಾಡಿದ ಬೀಡಿ ತುಂಡುಗಳನ್ನು ನಾವು ಕ್ರಮೇಣ ಶೇಖರಿಸತೊಡಗಿದೆವು. ಅವರು ಅಕ್ಷರಗಳ

ಜತೆಗೆ ಅಂಕೆಗಳನ್ನೂ ಹೇಳಿಕೊಟ್ಟರು; ನಶ್ಯ ಹಾಕುವುದರ ಜತೆಗೆ ಬೀಡಿ ಸೇದುವುದನ್ನೂ ಕಲಿಸಿಬಿಟ್ಟರು! ಒಂದು ದಿವಸ ಮಧ್ಯಾಹ್ನ ಶೇಖರಿಸಿದ್ದ ಬೀಡಿ ತುಂಡುಗಳನ್ನೆಲ್ಲಾ ಸ್ನಾನದ ಮನೆಗೆ ತೆಗೆದು ಕೊಂಡು ಹೋಗಿ, ಹತ್ತಿಸಿ ಸೇದಿದೆವು. "ಮಾಡಬಾರದ್ದು ಮಾಡಿದರೆ, ಆಗಬಾರದ್ದು ಆಗುತ್ತದೆ." ಹೊಗೆಯು ಶ್ವಾಸಕೋಶಕ್ಕೆ ಹೋಗಿ ಎಲ್ಲರೂ ಗಟ್ಟಿಯಾಗಿ ಕೆಮ್ಮಲಾರಂಭಿಸಿದೆವು. ನಮ್ಮ ಕೆಮ್ಮುಗಳ ಆರ್ಭಟವನ್ನು ಆಲಿಸಿ, ಇದೇನು ಅವಾಂತರವೆಂದು ನೋಡಲು ನಮ್ಮ ಚಿಕ್ಕಯ್ಯ ಸ್ನಾನದ ಮನೆಗೆ ಬಂದರು. ಬೀಡಿ ತುಂಡುಗಳನ್ನೆಲ್ಲಾ ಒಲೆಗೆ ಹಾಕಿದರು. ನಮಗೆಲ್ಲಾ ಸರಿಯಾದ ಮರ್ಯಾದೆ ಆಯಿತು. ಐಗಳಿಗೂ ಆಯಿತೆಂದು ತೋರುತ್ತದೆ!

ನಮ್ಮ ನಾಲ್ಕಡಿ ಐಗಳು ಬಹಳ ಗಟ್ಟಿಗರಾಗಿದ್ದರು. ರಾಮಾ ಯಣ ಭಾರತ ಚೆನ್ನಾಗಿ ಓದುತ್ತಿದ್ದರು. ಯಕ್ಷಗಾನ ಹಾಡು ತ್ತಿದ್ದರು. "ಪ್ರಸಂಗ" ಮಾಡುತ್ತಿದ್ದರು. ಸಾರಾಯಿ ಕುಡಿಯು ತ್ತಿದ್ದರು, ಜೂಜಾಡುತ್ತಿದ್ದರು. ನಮ್ಮ ಉಪ್ಪರಿಗೆ ಕಾಲೇಜಿನ ಯೋಗ್ಯತೆಗೆ ಅವರು ಮೀರಿದ್ದರಾದುದರಿಂದ ಅವರಿಗೆ ಬಹುಬೇಗ ಪೆನ್ಷನ್ ಇಲ್ಲದೆ ರಿಟೈರಾಯಿತು.

ಹೀಗೆಯೇ ಕೆಲವು ಮಂದಿ ಐಗಳು ಬಂದು ಹೋದರು. ನಮ್ಮ ವಿದ್ಯಾಭ್ಯಾಸವು ಸಾಂಗವಾಗಿ ಸಾಗುತ್ತಿತ್ತು. ಕಡೆಗೆ ಮಂಗಳೂರಿ ನಿಂದ ಆನಂದರಾಯರೆಂಬುವರು ಐಗಳಾಗಿ ಬಂದರು. ಅವರು ನವೀನ ವಿದ್ಯಾಭ್ಯಾಸ ಮಾಡಿದವರಾಗಿದ್ದರು. ಜಾತಿಯಲ್ಲಿ "ರೋಮನ್ ಕ್ಯಾಥೋಲಿಕ"ರಾಗಿದ್ದರು. ಅವರೇ ನಮಗೆ "ಮೇಷ್ಟರು, ಸಾರ್" ಎಂಬ ಎರಡು ಪವಿತ್ರವಾದ ಇಂಗ್ಲೀಷು ಶಬ್ದಗಳನ್ನು ಉಪದೇಶಿಸಿ ನಮ್ಮನ್ನು ಆಧುನಿಕರನ್ನಾಗಿ ಮಾಡಿದ ಪುಣ್ಯಾತ್ಮರು! ಅವರು ಬಂದ ಮೇಲೆ ಐಗಳೆಲ್ಲಾ ಮೇಷ್ಟರಾದರು! ನಾವೆಲ್ಲಾ ಮ್ಲೇಚ್ಛರಾದೆವು. (?) ಅಂತೂ ಅವರನ್ನು ನಮ್ಮನಮ್ಮೊಳಗೆ ಮಾತಾಡಿಕೊಳ್ಳುವಾಗ "ಮೇಷ್ಟೈಗಳು" ಎಂದೇ ಕರೆಯುತ್ತಿದ್ದೆವು. ಪ್ರಾಚೀನ ಆಧುನಿಕ ಎರಡೂ ಕೈಕೈ ಹಿಡಿದುಕೊಂಡೇ ಹೋಗಬೇಕಷ್ಟೆ? ಆ ನಿಯಮದ

ಪ್ರಕಾರ "ಮೋಕ್ಷ್ಯೈಗಳು" ಎಂಬುದು ತಪ್ಪಾಗುವುದೂ ಇಲ್ಲ; ಹಾಸ್ಯಾಸ್ಪದವಾಗುವುದೂ ಇಲ್ಲ.

ಆನಂದರಾಯರು, ಭಗೀರಥ ಪ್ರಯತ್ನಮಾಡಿ ನಮಗೆಲ್ಲಾ ಪುಸ್ತಕಗಳ ಮುಖಸಂದರ್ಶನ ಮಾಡಿಸಿದರು. ಇಂಗ್ಲೀಷು ಅಕ್ಷರ ಮಾಲೆಯನ್ನೂ ಕಲಿಸಿದರು. ಇವರು ಹಿಂದಿನ ಐಗಳಂತೆ ಕಲ್ಲೆದೆಯ ಸೈತಾನರಾಗಿರಲಿಲ್ಲ. ಯದ್ವಾತದ್ವಾ ಹೊಡೆಯುತ್ತಿರಲಿಲ್ಲ. ಕಂಡಾ ಬಟ್ಟೆ ಬೈಯುತ್ತಿರಲಿಲ್ಲ. ಇವರೇ ಮೊದಲು ನಮಗೆ ವಿದ್ಯಾಭ್ಯಾಸದಲ್ಲಿ ಆದರ, ಉತ್ಸಾಹ, ಕುತೂಹಲ ಇವುಗಳನ್ನು ಹುಟ್ಟಿಸಿದ ಪ್ರಥಮ ಗುರುಗಳು. ಗಣಿತ ಹೇಳಿಕೊಟ್ಟರು. ಕಾಪೀ ಪುಸ್ತಕ ಕೊಂಡು ಕೊಟ್ಟರು. ಆನಂದರಾಯರಲ್ಲಿ ನಮಗೆ ಆದರ ಹುಟ್ಟುವುದಕ್ಕೆ ಇನ್ನೊಂದು ಕಾರಣ ಉಂಟು. ಅದೇನೆಂದರೆ, ಅವರು ಪ್ರತಿದಿನವೂ ನಮಗೆ "ಯುವನ ಯಾಮಿನೀ ಕಥೆ"ಗಳನ್ನು ಓದಿ ಹೇಳುತ್ತಿದ್ದರು. "ಯುವನ ಯಾಮಿನೀ ಕಥೆ"ಗಳೆಂದರೆ ಆನಂದರಾಯರ ಬೈಬಲು! ಹಗಲೂ ರಾತ್ರಿ ಅದನ್ನು ಓದುತ್ತಿದ್ದರು. ಅವರಲ್ಲಿ ಇನ್ನೇನು ಸವೀ ಸತೆ ಇದ್ದಿತೆಂದರೆ ಅವರ "ಕ್ರಾಪು". ನಾವು "ಹಳ್ಳಿಗಮಾರ"ಗಳಾಗಿದ್ದೆವು." "ಕ್ರಾಪು" ಕಂಡೂ ಇರಲಿಲ್ಲ, ಕೇಳಿಯೂ ಇರಲಿಲ್ಲ! ನಾವೆಲ್ಲ ಆಗ ಜುಟ್ಟಿನ ಜೆಟ್ಟಿಗಳಾಗಿದ್ದೆವು. ಜುಟ್ಟು ಕತ್ತರಿಸುವುದು ಪ್ರಾಯಶ್ಚಿತ್ತವೇ ಇಲ್ಲದ ಪಾಪದ ಕಾರ್ಯವೆಂದು ನಮ್ಮೂರಿನವರ ಭಾವನೆಯಾಗಿತ್ತು. "ಕ್ರಾಪು" ಬಿಟ್ಟರೆ "ಕ್ರೈಸ್ತ"ನಾದನೆಂದು ತಿಳಿದಿದ್ದರು. ಈಗ ಮಾತ್ರ ಕ್ರಾಪಿನ ಪ್ರಭಾವ ಹೆಚ್ಚಿ ನಮ್ಮೂರಿನಲ್ಲಿ ಜುಟ್ಟಿಗೇ ಅಭಾವ!

ತಮ್ಮೂರಿನಲ್ಲೇನೋ ಕಷ್ಟ ಪ್ರಾಪ್ತಿ ಆದ್ದರಿಂದ ಆನಂದರಾಯರು ಮಂಗಳೂರಿಗೆ ಹೊರಟುಹೋದರು. ನಮಗೆ ಪುನಃ ರಜಾ ದಿನಗಳು ಬಂದುವು. ಆದರೆ ಈಗ ಹಿಂದಿನಂತೆ ರಜದಲ್ಲಿ ಅಷ್ಟು ಅಭಿಲಾಷೆಯು ಇರಲಿಲ್ಲ. ಕೆಲವು ದಿನಗಳೊಳಗಾಗಿ ಬೆಂಗಳೂರಿನಲ್ಲಿ ಓದುತ್ತಿದ್ದ ನಮ್ಮ ಕಕ್ಕಯ್ಯ ಮತ್ತು ಅಣ್ಣಯ್ಯ ಇಬ್ಬರೂ ಬೇಸಿಗೆ ರಜಾಕ್ಕೆ ಮನೆಗೆ ಬಂದರು. ಅವರು ಬರುವಾಗ ಜತೆಯಲ್ಲಿ ವ್ಯಾಸ

ರಾಯರೆಂಬವರನ್ನು ಕರೆತಂದರು. ಅವರು ಜಾತಿಯಲ್ಲಿ ಬ್ರಾಹ್ಮಣ ರಾಗಿದ್ದರು. ಅತಿ ಸಾಧುಗಳು. ತತ್ತ್ವಶಾಸ್ತ್ರದಲ್ಲಿ ಎಂ.ಎ. "ಡಿಗ್ರಿ" ಪಡೆದಿದ್ದರು. ಅಷ್ಟು ದೊಡ್ಡ ವಿದ್ವಾಂಸರು ನಮ್ಮ ಉಪ್ಪರಿಗೆ ಶಾಲೇ ಜಿಗೆ ಏಕೆ ಬಂದರೆಂಬ ರಹಸ್ಯ ಗೊತ್ತಾಗಲಿಲ್ಲ. ಎಲ್ಲಾ ಕೇಳಿ ತಿಳಿಯು ವಾಗ, ಅವರಿಗೆ ಸ್ವಲ್ಪ ಎಳೆಹುಚ್ಚು ಎಂದು ತಿಳಿಯಬಂದಿತು. "ಅತಿ ವಿದ್ಯೆ ಓದಿದರೆ ಅರೆಮರುಳಾಗುವರು" ಎಂಬ ನಮ್ಮೂರಿನವರಿಗಿದ್ದ ನಂಬಿಕೆಯು ಬಲವಾಗಿ ಬೇರೂರಿತು.

ವ್ಯಾಸರಾಯರು ನಿಜವಾಗಿಯೂ ಅರೆಮರುಳಾಗಿದ್ದರೆಂಬುದು ಮಾತ್ರ ಸಂದೇಹಾಸ್ಪದವಾದ ನಿರ್ಣಯ. ಪಾಪ, ತತ್ವಶಾಸ್ತ್ರವನ್ನು ಚೆನ್ನಾಗಿ ಓದಿ ಗ್ರಹಿಸಿದ್ದ ಅವರ ಆಚರಣೆಯು "ಹಳ್ಳಿಗಮಾರರಿಗೆ" ಹುಚ್ಚಿನಂತೆ ತೋರಿರಬಹುದು. ಹುಚ್ಚರೋ ಮರುಳರೋ ಏನೇ ಆಗಲಿ ಅವರ ಸ್ಮರಣೆಯು ನನಗೆ ಈಗಲೂ ಆನಂದದಾಯಕವಾಗಿ ಇರುವುದು. ಅವರ ನೆನಪಾಯಿತೆಂದರೆ, ನನಗೆ ಏನೋ ಒಂದು ವಿಧವಾದ ಸಂತೋಷ, ಎದೆಯು ಭಕ್ತಿರಸಮಿಶ್ರವಾದ ಆದರದಿಂದ ಹಿಗ್ಗುವುದು.

ಹುಚ್ಚೋ, ಮರುಳೋ, ಅಂತೂ ವ್ಯಾಸರಾಯರು ನಮಗೆ ಮೇಷ್ಟರಾದರು. ಅವರ ವಿಗಳತನದಲ್ಲಿ ರಜಕ್ಕೂ ಸಜಕ್ಕೂ ಭೇದ ವೇ ತೋರುತ್ತಿರಲಿಲ್ಲ. ಅವರಲ್ಲಿ ನಮಗೆ ಅತಿಸಲಿಗೆ; ಅವರೊಡನೆ ಯಾವಾಗಲೂ ನಮಗೆ ಹರಟೆ, ಆಟ; ಪಾಠದ ಮಾತೇ ಇಲ್ಲ. ತತ್ವ ಶಾಸ್ತ್ರದಲ್ಲಿ ಎಂ.ಎ. ಡಿಗ್ರಿ ಪಡೆದ ಆದರ್ಶಜೀವಿಯನ್ನು, ಒಂದನೇ ಎರಡನೇ ತರಗತಿಯಲ್ಲಿ ಒದ್ದಾಡುವ ಹಳ್ಳಿ ಹುಡುಗರಿಗೆ ಪಾಠ ಹೇಳಲು ಬಿಟ್ಟರೆ ಏನು ಪಾಠ ಹೇಳಿಯಾನು? ವ್ಯಾಸರಾಯರು ಸಿಗರೇಟು ಸೇದುತ್ತಿದ್ದರು. ನಾವು ತುಂಡುಗಳನ್ನು ಆಯ್ದು ಸೇದಿದೆವು. ಅವ ರಂತೂ ನಾವು ತುಂಡುಗಳನ್ನು ಆಯುವುದನ್ನು ಕಂಡರೂ ನಕ್ಕು ಬಿಟ್ಟು ಸುಮ್ಮನಿರುತ್ತಿದ್ದರು. ನಮಗಂತೂ ಹಾರುವ ಮಂಗಕ್ಕೆ ಏಣಿ ಹಾಕಿಕೊಟ್ಟಂತಾಯಿತು! ಮೇಷ್ಟರು ದೊಡ್ಡ ದೊಡ್ಡ ಕೊಬ್ಬಿ ಬೊಜ್ಜುಬೆಳೆದ ಗ್ರಂಥಗಳನ್ನು ಓದುತ್ತಾ, ತಲ್ಲೀನರಾಗಿ ಬಿಡುತ್ತಿದ್ದರು.

ಉಪ್ಪರಿಗೆಯಲ್ಲಿ ನಾವು ಮಾಡಿದ್ದೇ ಮಾಟ, ಆಡಿದ್ದೇ ಆಟ! ಹೆಚ್ಚೇನು? ವ್ಯಾಸರಾಯರ ಕಾಲದಲ್ಲಿ ಮಹಡಿಯು ಕಾಲೇಜೇ ಆಟದ ರಂಗವಾಯಿತು; ಆಟವೇ ಪಾಠವಾಯಿತು! "ವ್ಯಾಸರಾಯರೇ ಯಾವಾಗಲೂ ಮೇಷ್ಟರಾಗಿರಲಪ್ಪ" ಎಂದು ದಿನವೂ ನಾವು ದೇವರನ್ನು ಬೇಡುತ್ತಿದ್ದೆವು. ಈಗಲೂ ಕೂಡ ವ್ಯಾಸರಾಯರನ್ನು ಗುರುಗಳಾಗಿ ತೆಗೆದುಕೊಳ್ಳಲು ಸಿದ್ಧನಾಗಿದ್ದೇನೆ. ಅದರಲ್ಲಿ ನನ್ನ ಗೌರವಕ್ಕೇನೂ ಕುಂದಿಲ್ಲ, ವ್ಯಾಸರಾಯರು ಎಲ್ಲಿಯೇ ಇರಲಿ, ಬದುಕಿರಲಿ, ಸತ್ತಿರಲಿ, ಇಹದಲ್ಲಿರಲಿ, ಪರದಲ್ಲಿರಲಿ, ಅವರಿಗೆ ನನ್ನ ಸಾಷ್ಟಾಂಗ ನಮಸ್ಕಾರಗಳನ್ನು ಭಕ್ತಿಯಿಂದ ನಿವೇದಿಸುತ್ತೇನೆ. ಅವರು ಮಹನೀಯರು, ಜ್ಞಾನಿಗಳು, ಋಷಿಗಳು! ಮಂಗನಿಗೇನು ಗೊತ್ತು ಮಾಣಿಕ್ಯದ ಬೆಲೆ ಎಂಬಂತೆ "ಹಳ್ಳಿಗಮಾರರು" ವ್ಯಾಸರಾಯರ ಮಹಿಮೆ ಘನಶೀಲಗಳನ್ನು ಅರಿಯದೆ ಅವರನ್ನು ಅರೆಮರುಳರ ಗುಂಪಿಗೆ ಸೇರಿಸಿದ್ದರು.

ಪಾಠಕಮಹಾಶಯ, ಇಲ್ಲಿಗೆ ಐಗಳ ಮಾಲೆ ಮುಗಿಸುವೆನು. ನಿಮಗೂ ಬೇಸರವಾಗಿರಬಹುದು. ಒಂದು ವೇಳೆ ನಿಮಗಾಗದಿದ್ದರೂ ನನಗಾಗಿದೆ! ನಮಸ್ಕಾರ!

---

# ತೋಟದಾಚೆಯ ಭೂತ

ಪಾಠಕನೇ, ನೀನು ಎಲ್ಲಿಯಾದರೂ ನಮ್ಮ ಮನೆಯವನಾಗಿದ್ದರೆ, (ಅದೃಷ್ಟವಶದಿಂದ ಆಗಿಲ್ಲ;) ಈ ಪ್ರಬಂಧದ ನಾಮಾಂಕಿತವನ್ನು ಓದಿ ನಗುವ ಬದಲು ಅದನ್ನು ಭಯಭಕ್ತಿಗಳಿಂದ ಪೂಜಿಸುತ್ತಿದ್ದೆ. ಈಗಲಾದರೂ ನಗಬೇಡ, ಖಂಡಿತ ನಗಬೇಡ. ತೋಟದಾಚೆಯ ಭೂತದ ಮಹಿಮೆ ಸಾಮಾನ್ಯವೆಂದು ತಿಳಿಯಬೇಡ. ಉಡುಪಿ ಕೃಷ್ಣ ತಿರುಪತಿ ವೆಂಕಟರಮಣ ಮೊದಲಾದವರೆಲ್ಲರೂ ಒಬ್ಬರ ತಲೆಯ ಮೇಲೊಬ್ಬರು ಹತ್ತಿಕೊಂಡು ಬಂದರೂ ನಮ್ಮ ತೋಟದಾಚೆಯ ಭೂತದ ಮೊಳಕಾಲಿಗೆ ಮುಟ್ಟುವುದಿಲ್ಲ. ನಿನಗೆ ಪುಣ್ಯವಿಲ್ಲ. ನಮ್ಮ ಅಜ್ಜಮ್ಮನ ಉಪದೇಶ ಕೇಳುವುದಕ್ಕೆ! ನಿನಗೆ ಅವರ ಉಪನ್ಯಾಸ ಕೇಳುವ ಸುಕೃತ ಇದ್ದಿದ್ದರೆ, ಭೂತದ ಮಹಿಮೆ ಚೆನ್ನಾಗಿ ಗೊತ್ತಾಗುತ್ತಿತ್ತು. ನನಗಂತೂ ಈ ಜನ್ಮದಲ್ಲಿ ದೇವರು ಕೊಟ್ಟಿದ್ದು ಅಜ್ಜಮ್ಮನ ಉಪದೇಶ ಕೇಳುವ ಸೌಭಾಗ್ಯ ಒಂದೇ ಎಂದು ಭಾವಿಸಿದ್ದೇನೆ! ಈ ಪ್ರಬಂಧವು ನನ್ನ ಸ್ವಂತ ಪ್ರತಿಭೆಯ ಫಲವಲ್ಲ, ನಮ್ಮ ಅಜ್ಜಿಯ ಉಪನ್ಯಾಸಮಾಲೆಯಿಂದ ಸಂಗ್ರಹಿಸಿದ್ದು. ಈ ಅನುವಾದಕ್ಕೆ ಎಂದೆಂದಿಗೂ ಮೂಲ ಗ್ರಂಥದ ವೈಭವ, ವೈಸಿರಿ, ಓಜಸ್ಸು, ಸರಳತೆ, ಸಲಿಗೆ ಈ ಮಹಾ ಗುಣಗಳು ಬರುವದಿಲ್ಲವೆಂದು ನಾನು ಬಲ್ಲೆ. ಅಷ್ಟೇ ಅಲ್ಲದೆ ಎಲ್ಲಕ್ಕೂ ಬಹು ಮುಖ್ಯವಾದ ನಮ್ಮ ಅಜ್ಜಿಯ ಪವಿತ್ರ ವ್ಯಕ್ತಿತ್ವವು ಇದರಲ್ಲಿ ಬಿಟ್ಟು ಹೋಗಿರುವುದು. ಆದರೂ ಗಲಭೆಮಾಡದೆ ದೇಶಾಭಿವೃದ್ಧಿಗೆ ಶ್ರಮಪಡುತ್ತಿರುವ ನಮ್ಮ ಅಜ್ಜಿಯ ಅನುಭವ, ಪ್ರತಿಭೆ ಇವುಗಳನ್ನು ಪಾಠಕರಿಗೆ ಪರಿಚಯಮಾಡಿಕೊಡಬೇಕೆಂಬ ಕುತೂಹಲದಿಂದ ಈ ಮಹಾ ಕೆಲಸಕ್ಕೆ ಕೈಹಾಕಿದ್ದೇನೆ. ನಮ್ಮ ಅಜ್ಜಿಯ ಆಶೀರ್ವಾದ ಬಲದಿಂದ ಕಾರ್ಯವು ಸಾಂಗವಾಗಿ ನೆರವೇರುವುದರಲ್ಲಿ ಸಂದೇಹವಿಲ್ಲ.

ಪಾಠಕನೆ, ಎಲ್ಲರೂ 'ದೇವರ ಕೃಪೆಯಿಂದ' ಎಂದು ಬರೆಯುತ್ತಾರೆ. ನಾನು ಮಾತ್ರ 'ಅಜ್ಜಿಯ ಆಶೀರ್ವಾದ ಬಲದಿಂದ,' ಎಂದು ಬರೆದುದಕ್ಕೆ

ಆಶ್ಚರ್ಯಪಡಬೇಡ. ಈಗಿನ ಕಾಲದಲ್ಲಿ ದೇವರು ಎಂದರೆ ನಮಗೆಲ್ಲಾ ಬೇಸರ. ಶತಮಾನಗಳಿಂದಲೂ ದೇವರು ದೇವರು ಎಂದು ಬಡು ಕೊಂಡು ಮನಸ್ಸಿಗೆ ಜಿಡ್ಡುಹತ್ತಿಹೋಗಿದೆ. ನಿನ್ನ ಭಾವ ಹೇಗಿದೆ ಯೋ ಏನೋ ಗೊತ್ತಿಲ್ಲ. ನನಗಂತೂ ದೇವರಲ್ಲಿ ಬೇಸರಹುಟ್ಟಿ ಹೋಗಿದೆ. ಉದಾಹರಣೆಗಾಗಿ ನಾನು ಐದು ವರ್ಷಗಳಿಂದ "ದೇವ ರಾಣೆ" ಹಾಕುವುದನ್ನು ಬಿಟ್ಟು "ಸೈತಾನನಾಣೆ" ಹಾಕುತ್ತಿ ದ್ದೇನೆ! ಕೊಟ್ಟ ಭಾಷೆ ತಪ್ಪುವುದರಲ್ಲಿ ಮೊದಲಿಗಿಂತಲೂ ಈಗ ಎಷ್ಟೋ ಪ್ರವೀಣನಾಗಿದ್ದೇನೆ ಎಂದು ಎಲ್ಲರೂ ಹೇಳುತ್ತಾರೆ! ನನಗೆ ಮೊದಲಿ ಗಿಂತಲೂ ಹೆಚ್ಚಾಗಿಯೇ ಮಂಗಳವಾಗಿದೆ ಎಂದು ಹೇಳಬೇಕು. ಅದೂ ಅಲ್ಲದೆ ಅಜ್ಜಿಯ ಆಶೀರ್ವಾದವೇನು ಅವರಷ್ಟು ಬಲಹೀನವೆಂದು ತಿಳಿಯ ಬೇಡ. ಅವರ ಆಶೀರ್ವಾದ ಬಲದಿಂದಲೇ ತೀರ್ಥಹಳ್ಳಿಗೆ ಹೋಗಿ ಬಂದೆನು. ಅದು ಗೊತ್ತಾದುದು ಹೇಗೆಂದರೆ ಆದಿನ ಅನ್ನಬಲವೇ ಇಲ್ಲದೆ ತನ್ನ ಬಲವೇ ಅಡಗಿತ್ತು! ಊಟವೇ ಸಿಕ್ಕಲಿಲ್ಲ. ಒಂಬತ್ತು ಮೈಲಿ ಹೋಗಿಬಂದದ್ದು ಅವರ ಆಶೀರ್ವಾದಬಲದಿಂದಲೇ! ಒಂದು ಸಾರಿ ಮನೆಗೆ ಬಂದ ಬುಡುಬುಡುಕೆಯವನನ್ನು ಓಡಿಸಿ, ಅವನು ಕೊಟ್ಟ ಶಾಪಗಳನ್ನೆಲ್ಲಾ ಜೈಸಿದೆ. ಅವರ ಆಶೀರ್ವಾದ ಬಲದಿಂದಲೇ ಒಂದಾವರ್ತಿ ಇಪ್ಪತ್ತು ರೊಟ್ಟಿಗಳನ್ನು ತಿನ್ನುತ್ತೇನೆಂದು ಜೂಜುಕಟ್ಟಿ ಜೀವದಿಂದ ಬಚಾವಾಗಿ ಬಂದೆ. ಆವೊತ್ತು ನನ್ನಗತಿ ಮುಗಿಯಿತೆಂದೇ ತಿಳಿದಿದ್ದೆ. ನನ್ನ ಮುಂದೆ ಇಪ್ಪತ್ತು ರೊಟ್ಟಿಗಳ ದೊಡ್ಡರಾಶಿಹಾಕಿ ಕೇಳಿದಷ್ಟು ತುಪ್ಪಹಾಕಿ ಬಲಗಡೆ ಇಬ್ಬರು ಎಡಗಡೆ ಇಬ್ಬರು ಕುಳಿತು ಬಿಟ್ಟರು. ತೋಟದಾಚೆ ಭೂತದ ದೂತರೋ ಎನ್ನುವಹಾಗೆ ಕಾಡು, ಓಬು, ಸುಬ್ಬು, ತಿಮ್ಮು! ನಾನೂ ಆ ದಿವಸದವರೆಗೂ ಇಪ್ಪತ್ತುರೊಟ್ಟಿ ಎಂದರೆ ಎಷ್ಟಾಗುವುದೆಂಬುದನ್ನು ಗ್ರಹಿಸಿಯೇ ಇರಲಿಲ್ಲ. ನಿರಾ ಯಾಸವಾಗಿ ಮುಕ್ಕಿ ಎದ್ದು ಬಿಡಬಹುದೆಂದು ತಿಳಿದಿದ್ದೆ. ಆದರೆ ಕಲ್ಪನಾ ರಾಜ್ಯದಿಂದ ಕಾರ್ಯರಂಗಕ್ಕೆ ಬರಲು ಎದೆ ಹಾರಿಯೇಹೋ ಯಿತು. ಒಂದು ರೊಟ್ಟಿ ಪೂರೈಸಿ ಇನ್ನರ್ಧ ತಿನ್ನುವುದರೊಳಗಾಗಿ ಹೊಟ್ಟೆತುಂಬಿ ಮನದಲ್ಲಿಯೇ ಕೆಟ್ಟೆನೆಲ್ಲಾ ಎಂದುಕೊಂಡೆ. ಎರಡನೆ

ಯುದರಲ್ಲಿ ಉಳಿದರ್ಧವನ್ನು ಹೇಗೋ ಮಾಡಿ ಬಲಾತ್ಕಾರದಿಂದ ಗಂಟಲ ಕೆಳಕ್ಕೆ ನೂಕಿದೆನು. ಮೂರನೆಯುದರಲ್ಲಿ ಒಂದು ತುಂಡನ್ನು ತೆಗೆದು ತುಪ್ಪದಲ್ಲಿ ಅದ್ದಿ ಬಾಯಲ್ಲಿ ಹಾಕಿದ್ದೆ, ಅಷ್ಟರಲ್ಲಿ ಜಠರವು ಅಪರಾಧಿಯಾದ ಎರಡನೆಯುದನ್ನು ನಿರಪರಾಧಿಯಾದ ಒಂದನೆಯುದರ ಸಮೇತ ತನ್ನ ರಾಜ್ಯದಿಂದ ಗಡೀಪಾರು ಮಾಡಿಬಿಟ್ಟಿತು. ಅಂದು ನನ್ನ ದುರವಸ್ಥೆಯನ್ನು ನೋಡಿ ಅಜ್ಜಮ್ಮ, ಪಹರೆಯವರನ್ನು ಚೆನ್ನಾಗಿ ಬೈದು ನನ್ನನ್ನು ಚೂಜಿನಕಟ್ಟೆಯಿಂದ ಬಿಡಿಸಿದರು. ಇವೇ ಮೊದಲಾದ ಅನುಭವಗಳಿಂದ ಅಜ್ಜಿಯ ಆಶೀರ್ವಾದ ಒಂದರಲ್ಲಿ ನನಗೆ ಪೂರಾ ನಂಬಿಕೆ ಹುಟ್ಟಿರುವುದು. ಇವೆಲ್ಲಾ ಉಪವಿಷಯಗಳಾಯಿತು. ಇನ್ನು ಮುಖ್ಯ ವಿಷಯಕ್ಕೆ.

ಮಸಲ, ನಾನು ಒಬ್ಬ ದೊಡ್ಡ ಪ್ರಬಂಧಕಾರನಾದೆನೆಂದು ಇಟ್ಟುಕೋ! ಆಗುವುದಿಲ್ಲ; ನನಗೆಗೊತ್ತು, ಆದರೂ ಮಾತಿಗೆ ಇಟ್ಟುಕೋ! ಮಸಲ ಈ ಪ್ರಬಂಧವು ಬಹು ಪ್ರಸಿದ್ಧವಾಯಿತೆಂದು ಇಟ್ಟುಕೋ! ಅದೂ ಸಂದೇಹಕರ, ಪರವಾಇಲ್ಲ, ಇಟ್ಟುಕೋ! ಮಸಲ, ನೀನು ಇದನ್ನು ಓದಿದೆಯೆಂದು ಇಟ್ಟುಕೋ! ನೀನು ಓದುವುದೂ ನನಗೆ ಗೊತ್ತು! ಆದರೂ ಇಟ್ಟುಕೋ! ಸದ್ಯಕ್ಕೆ ಎಲ್ಲಾ ಮಸಲವಷ್ಟೆ? ಮುಸಲವಲ್ಲ, ಮುಸಲವಾದರೆ ಕಷ್ಟ, ಅದನ್ನು ಹೊರುವುದು! ಮಸಲ, ನಿನಗೆ ತೋಟದಾಚೆಯ ಭೂತವನ್ನು ನೋಡಲೇಬೇಕೆಂದು ಚಪಲಹುಟ್ಟಿತು ಅಂತ ಇಟ್ಟುಕೋ! ಮಸಲ, ನಿನ್ನ ಹತ್ತಿರ ರೈಲು ಮೋಟಾರುಗಳ ಛಾರ್ಜುಕೊಡಲು ದುಡ್ಡಿತ್ತು ಎಂತ ಇಟ್ಟುಕೊ. ನನಗೆ ಗೊತ್ತು, ಅದಕ್ಕೇ ಸ್ವಲ್ಪ ಅಭಾವ ಈಗಿನಕಾಲದಲ್ಲಿ; ಆದರೆ ನಾನು ಹೇಳಿದ್ದು ಮಸಲದ ದುಡ್ಡು. ಎಲ್ಲರ ಹತ್ತಿರವೂ ಸಾಧಾರಣವಾಗಿ ಇದ್ದೇ ಇರುತ್ತದೆ. ಮಸಲ, ಮೇಲೆ ಹೇಳಿದ ನಿಬಂಧನೆಗಳೆಲ್ಲಾ ನಮ್ಮ ಅಜ್ಜಿಯ ಆಶೀರ್ವಾದಬಲದಿಂದ ಕೈಗೂಡಿದುವೆಂದು ಇಟ್ಟುಕೊ! ಇಷ್ಟೆಲ್ಲವನ್ನೂ ಕಳೆಯದೆ ದುರ್ವ್ಯಯಮಾಡದೆ ಇಟ್ಟುಕೊಂಡರೆ, ನೀನು ನಮ್ಮ ಮನೆಗೆ ಬರುವೆ ಎಂದು ಇಟ್ಟುಕೊಳ್ಳೋಣ.

ನೀನು ನಮ್ಮ ಮನೆಗೆ ಬಂದಾಗ (ನಾನೇ ಪುಣ್ಯವಶದಿಂದ ಕಾಡಿಗೆ

ಹೋಗದೆ ಮನೆಯಲ್ಲಿದ್ದರೆ)ನಿನ್ನ ಜೊತೆ ತೋಟದಾಚೆಯ ಭೂತದ ಬಳಿಗೆ 'ನಾನೇ' ಖುದ್ದು ಬರುತ್ತೇನೆ. ನಮ್ಮ ಮನೆಯ ಮುಂಭಾಗದಲ್ಲಿಯೇ ಅಡಕೆ ತೋಟ ಉಂಟು , ಬಾಳೇ ತೋಟವೂ ಅದರಲ್ಲಿಯೇ ಅಡಕ ವಾಗಿದೆ. ಬೇಸಗೆಯಲ್ಲಿ ಅಡಕೆಮರಗಳ ಬುಡಗಳಿಗೆ ನೆರಳು ಬಂದು ತಂಪಾಗಲೆಂದು ಅಡಕೆ ತೋಟಗಳಲ್ಲಿ ಬಾಳೆಗಿಡಗಳನ್ನು ಸಿಬಿಡವಾಗಿ ಬೆಳೆಯಿಸುವರು. ಅದೂ ಅಲ್ಲದೆ, ಬಾಳೆಯಮರದ ಗೆಡ್ಡೆಗಳು ಸ್ವಾಭಾವಿಕವಾಗಿ ಜಲಮಯವಾಗಿರುವುದರಿಂದ ಅಡಕೆಮರದ ಬುಡ ಗಳಿಗೆ ತೇವವೂ ದೊರಕಿದಂತಾಗುವುದು. ತೋಟವನ್ನು ದಾಟಿದರೆ ಒರೆಯಾಗಿ ಬೆಟ್ಟವನ್ನಡರಿರುವ ದಟ್ಟಡವಿಯ ಸೆರಗಿಗೆ ಬರುವೆವು. ಅಲ್ಲಿ ಮರಗಳು ಪೊದೆಗಳು ವಿರಳವಾಗಿರುವುವು. ತೋಟದ ಅಂಚಿನಲ್ಲಿ ಮಾತ್ರ ದಟ್ಟವಾಗಿ ಬೆಳೆದ ಒಂದು ಮರಗಳ ಗುಂಪು ಕಂಡುಬರು ತ್ತದೆ. ಆ ತೋಪೇ ನಮ್ಮ "ಭೂತರಾಯನ ಬನ". ಅಲ್ಲಿಗೆ ಹೋಗಿ ನೋಡಿದರೆ ವಿಶೇಷವೇನೂ ತೋರುವುದಿಲ್ಲ. ಒಂದು ದೊಡ್ಡ ರಂಜದ ಮರದ ಬುಡದಲ್ಲಿ ಒಂದು ಕಾಡುಕಲ್ಲು ಕಂಡುಬರುತ್ತದೆ. "ಮರದ ಬುಡದ ಕಾಡುಕಲ್ಲು" ಎಂದರೆ ಭೂತರಾಯನ ಬಂಗಲೆಯ ವರ್ಣನೆ ಮುಗಿಯುತ್ತದೆ.

ಭೂತರಾಯನ ಪ್ರತಿನಿಧಿಯಾದ ಆ ಕಾಡುಕಲ್ಲಿಗೆ ಪ್ರತಿವರ್ಷವೂ ಹರಕೆ ಸಲ್ಲುವುದು. ಆಗ ಅನೇಕ ಕುರಿ ಕೋಳಿಗಳ ಬಲಿಯಾಗುವುದು. ಭೂತಕ್ಕೆ ಬಲಿ ಎಂದರೆ ಬಹಳ ವಿಶ್ವಾಸವಂತೆ. ಊರಿನವರೆಲ್ಲಾ, ಕನ್ನಡ ಜಿಲ್ಲೆಯಿಂದ ಬಂದ ಕೂಲಿಯಾಳುಗಳೂ ಸೇರಿ ಅದಕ್ಕೆ ಪರಮ ಭಕ್ತರು. ದನಕರುಗಳಿಗೆ ರೋಗಬಂದರೆ ಒಂದು ಕೋಳಿಯನ್ನೋ ಅಥವಾ ಒಂದು ತೆಂಗಿನಕಾಯಿಯನ್ನೋ, ಅಥವಾ ಮೂರು ಕಾಸ ನ್ನೋ ರೋಗಿಯಾದ ಪ್ರಾಣಿಗೆ ಪ್ರದಕ್ಷಿಣೆ ಬರಿಸಿ, ಭೂತರಾಯನಿಗೆ "ಹೇಳಿಕೊಂಡು" ಮುಡುಪುಕಟ್ಟುವರು. ರೋಗಕ್ಕೆ ಅನೇಕ ಔಷಧಗಳನ್ನು ಕೊಡುವರು. ಔಷಧದಿಂದ ರೋಗ ಗುಣವಾದರೂ ಕೀರ್ತಿಯೆಲ್ಲಾ ಭೂತರಾಯನಿಗೆ.

ಉದಾಹರಣೆಗಾಗಿ ನಡೆದ ಒಂದು ಸಂಗತಿ ಹೇಳುವೆನು. ಒಂದು

ದಿನ ಸಂಜೆಯ ಸಮಯ, ನಾನು ಉಪ್ಪರಿಗೆಯ ಮೇಲೆ ಶ್ರೀಯುತ ಲೋಕಮಾನ್ಯ ಬಾಲಗಂಗಾಧರ ತಿಲಕರವರ "ಗೀತಾರಹಸ್ಯ" ಓದುತ್ತಾ ಕುಳಿತಿದ್ದೆ. ಅಲ್ಲಿಯೇ ಸಮೀಪದಲ್ಲಿ ಬೇಟೆಗಾರ ಪುಟ್ಟಣ್ಣ ತೋಟಾ ಕೋವಿಗಳನ್ನು ಕಳಚಿ ನಳಿಗೆಗಳನ್ನೆಲ್ಲಾ ಚೆನ್ನಾಗಿ ಉಜ್ಜಿ ಎಣ್ಣೆ ಹಚ್ಚುತ್ತಿದ್ದ. ಹಠಾತ್ತಾಗಿ ನಮ್ಮ "ಬಾಣಸಿಗ ಭೀಮ" (ಅವನ ನಿಜವಾದ ಹೆಸರು ನಂಜ ಎಂದು; ಅವನ ಹೊಟ್ಟೆಬಾಕತನ ನೋಡಿ ಹಾಗೆಂದು ಅಡ್ಡಹೆಸರಿಟ್ಟೆವು.) ಏದುತ್ತಾ ಓಡಿಬಂದು "ಒಂದು ಎಮ್ಮೆಕರು ಸಾಯಲಿಕ್ಕಾಗಿದೆ: ಬಿದ್ದು ಒದ್ದುಕೊಳ್ಳುತ್ತಿದೆ! ಎಂದು ಬಹಳ ಕಳ್ಕಳತೆಯಿಂದ ನುಡಿದನು. ನಾನು ಪುಟ್ಟಣ್ಣ ಕೊಟ್ಟಿಗೆಗೆ ಓಡಿದೆವು. ಬಡಪ್ರಾಣಿಯ ಹೊಟ್ಟೆಯು ಊದಿದ್ದಿತು. ಬಾಯಲ್ಲಿ ನೊರೆ ಬೀಳುತ್ತಿತ್ತು. ಕಣ್ಣು ಹರಳುಗಳು ಎವೆಯ ಒಳಗಾಗಿದ್ದುವು. ಅದರ ಸ್ಥಿತಿಯು ಶೋಚನೀಯವಾಗಿತ್ತು. ಅಲ್ಲಿಗೆ ಬಂದ ನಮ್ಮ ದೊಡ್ಡಮ್ಮನವರು "ಇದು ಭೂತರಾಯನ ಚೇಷ್ಟೆ. ಒಂದು ಕಾಯಿ ಸುಳಿದಿಟ್ಟು ಹೇಳಿಕೊಳ್ಳಿ" ಎಂದರು. ಪುಟ್ಟಣ್ಣನು ಕರುವಿನ ಬೆನ್ನ ಮೇಲಿದ್ದ ಕೂದಲು ಹಿಡಿದೆಳೆದು ಅದರ ಮುಸುಡಿಯನ್ನು ತನ್ನ ಮೂಗಿನ ಬಳಿ ಇಟ್ಟುನೋಡಿ "ಇದು ಮತ್ತೇನೂ ಅಲ್ಲ ಬಳ್ಳಿ ಮುಟ್ಟಿದ್ದು" ಎಂದು ಗುಡ್ಡದಕಡೆ ಓಡಿಹೋದನು. "ಬಳ್ಳಿ ಮುಟ್ಟಿದ್ದು" ಎಂದರೆ ಹಾವು ಕಡಿಯುವುದು ಎಂದರ್ಥ! ನಮ್ಮ ಕಡೆ ಹಾವು ಕಡಿದಿದೆ ಎಂದು ಹೇಳುವುದು ಅಮಂಗಳಕರವೆಂಬ ಭೀತಿಯಿಂದ "ಬಳ್ಳಿ ಮುಟ್ಟಿದೆ" ಎನ್ನುತ್ತಾರೆ. ಪುಟ್ಟಣ್ಣ ಗುಡ್ಡದಿಂದ ಔಷಧ ತರುವಷ್ಟರಲ್ಲಿ ನಂಜ ಒಳಗಿನಿಂದ ಬಂದು ತೆಂಗಿನಕಾಯಿ ತಂದು ಅದನ್ನು ಕರುವಿಗೆ "ಸುಳಿದು" (ಪ್ರದಕ್ಷಿಣೆ ಬರಿಸಿ) "ಭೂತರಾಯ ಏನಿದ್ದರೂ ಇದರ ಮೇಲೆಯೇ ನಿಲ್ಲಲಿ! ಏನು ಮುಟ್ಟುಚಟ್ಟು ಆಗಿದ್ದರೂ ಎಲ್ಲಾ ಹರಕೆಯದಿನ ಭಟ್ಟರಿಂದ ಶುದ್ಧಿಮಾಡಿಸುತ್ತೇವೆ;" ಎಂದು ತೋಟದ ದಿಕ್ಕಿಗೆ ಕೈಮುಗಿದು ಮುಡುಪುಕಟ್ಟಿದನು. ನಿಂತಿದ್ದವರೆಲ್ಲರೂ, "ಈಗ ಕರು ಸ್ವಲ್ಪ ಒದ್ದಾಟ ಕಮ್ಮಿಮಾಡಿತು. ಭೂತರಾಯನ ಚೇಷ್ಟೆಯೇ ಹೌದು!!" ಎಂದು ಒಬ್ಬರ ಮಾತನ್ನು ಒಬ್ಬರು ಸಮ

ರ್ಥಿಸಿದರು. ಸುಮ್ಮನೆ ನಿಂತಿದ್ದ ನಾನು ನಗುವನ್ನು ತಡೆಯಲಾರದೆ "ಹೌದು ಹೌದು, ಭೂತರಾಯನ ಚೇಷ್ಟೆಯೇ! ಔಷಧಿ ಮಾಡದೆ ಇನ್ನೊಂದು ತೆಂಗಿನಕಾಯಿಯನ್ನು ಮುಡುಪುಕಟ್ಟಿದರೆ ಬಹುಶಃ ಒದ್ದಾಟವೇ ನಿಲ್ಲಬಹುದು" ಎಂದೆನು.

ಅಷ್ಟರಲ್ಲಿ ಪುಟ್ಟಣ್ಣ ಬಾಯಿಯಲ್ಲಿ ಏನನ್ನೋ ಅಗಿಯುತ್ತಾ ಬಂದು ಅದನ್ನು ಕರುವಿನ ನಾಸಿಕದ್ವಾರದೊಳಗೂ ಕಣ್ಣಿನೊಳಗೂ ಉಗಿದು, ಬಾಲವನ್ನು ಎಳೆದು ಬೆನ್ನೆಲುಬನ್ನು ಚೆನ್ನಾಗಿ ನೀಳಮಾಡಿ ನೀವಿದನು. ಕರುವು ಐದು ನಿಮಿಷದೊಳಗಾಗಿ ಎದ್ದುನಿಂತಿತು. ಎಲ್ಲರೂ ಭೂತರಾಯನ ಶಕ್ತಿಯನ್ನೇ ಕುರಿತು ಸಂಭಾಷಣೆಮಾಡುತ್ತಾ ತೆರಳಿದರು. ಪುಟ್ಟಣ್ಣನ ಔಷಧವನ್ನು ಮಾತ್ರ ಮರೆತುಬಿಟ್ಟರು; ಅದು ಅವರ ಮೆದುಳಿಗೆ ಹತ್ತಲಿಲ್ಲ. ಎಲ್ಲರೂ ಹೊರಟುಹೋದ ಮೇಲೆ ಪುಟ್ಟಣ್ಣನನ್ನು ಕುರಿತು "ಅದೇನು ಎಲೆಯೋ? ನೀನು ಅಗಿಯುತ್ತಾ ಬಂದದ್ದು" ಎಂದು ಕೇಳಿದೆನು. ಅದಕ್ಕೆ ಅವನು "ಔಷಧದ ಹೆಸರು ಯಾವಾಗಲೂ ಹೇಳಬಾರದು. ಹೇಳಿದರೆ ಅದರ ಶಕ್ತಿಯೇ ಹೋಗಿಬಿಡುತ್ತದೆ" ಎಂದನು.

ನಮ್ಮ ಭೂತರಾಯನಿಗೆ ಈಗ ಇರುವ ಶಕ್ತಿಗಿಂತಲೂ ಹಿಂದೆ ಇದ್ದಶಕ್ತಿಯೇ ಅತಿಶಯವಂತೆ. ಬಹುಶಃ ಆಧುನಿಕರೆಲ್ಲಾ ಪ್ರಾಚೀನರಿಗಿಂತ ಹೇಗೆ ಹೀನತರ ಸ್ಥಿತಿಯಲ್ಲಿ ಇದ್ದಾರೆಯೋ ಹಾಗೆಯೇ ಭೂತರಾಯನ ಆಧುನಿಕಮಹಿಮೆಯು ಪ್ರಾಚೀನಮಹಿಮೆಗಿಂತ ನಿಕೃಷ್ಟ ಗತಿಗೆ ಇಳಿದಿರಬಹುದೆಂದು ತೋರುತ್ತದೆ. ಪಾಪ! ಕಲಿರಾಯನ ನಿರಂಕುಶಪ್ರಭುತ್ವದಿಂದ ನಮ್ಮ ಭೂತರಾಯನಿಗೂ ಕೂಡ ಉಳಿಗತಿ ಇಲ್ಲ.

ಭೂತರಾಯನಿಗೆ ಇದ್ದ ಹಿಂದಿನ ಶಕ್ತಿಮಹಿಮೆಗಳನ್ನು ದೃಷ್ಟಾಂತಪಡಿಸಲು, ಅಜ್ಜಮ್ಮ ಬಹು ಸ್ವಾರಸ್ಯವಾದ ಕಥೆಗಳನ್ನು ಹೇಳುತ್ತಿದ್ದರು. ನಮ್ಮ ಕಣವು ಮನೆಯಿಂದ ಸುಮಾರು ಒಂದುವರೆ ಫರ್ಲಾಂಗು ದೂರದಲ್ಲಿದೆ. ಸುಗ್ಗಿಕಾಲದಲ್ಲಿ ಪೈರನ್ನು ಒಕ್ಕಿದ ತರುವಾಯ ತೂರಿದ ಬತ್ತವನ್ನು ಅಲ್ಲಿಯೇ ರಾಶಿಮಾಡಿ ಇಟ್ಟು ಮನೆಗೆ

ಬರುತ್ತಾರೆ. ಬೆಳಿಗ್ಗೆ ಅದನ್ನು ಹೊತ್ತು ಕಣಜಕ್ಕೆ ಸುರಿಯು ತ್ತಾರೆ. ಇದು ಬಹು ಕಾಲದಿಂದಲೂ ನಡೆದುಬಂದ ವಾಡಿಕೆ. ಒಂದು ದಿನ ರಾತ್ರಿ ಕೆಲವು ಜನ ಕಳ್ಳರು ಬಂದು ಬತ್ತವನ್ನು ಕಳಲೆಳಸಿದರಂತೆ. ಅವರು ಕೆಲವು ಮೂಟೆಗಳಿಗೆ ಬತ್ತ ತುಂಬಿದ್ದರಂತೆ. ಇಬ್ಬರು ಬತ್ತ ಅಳೆಯುತ್ತಿದ್ದರಂತೆ, ಕೆಲವರು ಮೂಟೆತೆಗೆದು ಬೆನ್ನಮೇಲೆ ಹಾಕಿ ಕೊಂಡಿದ್ದರಂತೆ; ಬೆಳಗಾಗುವವರೆಗೂ ಅವರೆಲ್ಲರೂ ಹಾಗೆಯೇ ನಿಷ್ಪಂದವಾಗಿ ನಿಂತುಬಿಟ್ಟಿದ್ದರಂತೆ! ಕಡೆಗೆ ನಮ್ಮ ಅಜ್ಜಯ್ಯ ಹೋಗಿ ಭೂತರಾಯನಿಗೆ ಹೇಳಿಕೊಳ್ಳಲು ಮಂತ್ರಮುಗ್ಧರಾದ ಅವರಿಗೆ ಏನೋ ಚಲನೆಯಾಯಿತಂತೆ! ಆಮೇಲೆ ಕಳ್ಳರನ್ನು ಚೆನ್ನಾಗಿ ಬೆನ್ನುಮುರಿಯು ವಂತೆ ಹೊಡೆದು ಅಟ್ಟಿದರಂತೆ!

ಮತ್ತೊಂದು ಸಾರಿ ನಮ್ಮ ಮನೆಯಲ್ಲಿ ಯಾರಿಗೋ "ಅಮ್ಮ" (ಸಿಡುಬು) ಎದ್ದಿದ್ದಂತೆ. ಆಗ ಎಲ್ಲರೂ ಮನೆ ಬಿಟ್ಟು ಬೇರೆ ಕಡೆ ಇದ್ದರಂತೆ. ಆಗ ತೋಟಕ್ಕೆ ಭೂತರಾಯನೇ ಕಾವಲಿರಬೇಕೆಂದು ಅಜ್ಜಯ್ಯ ಹೇಳಿಕೊಂಡಿದ್ದರಂತೆ. ತೋಟದಲ್ಲಿ ವೀಳ್ಯದೆಲೆ ಹಂಬು ಬಹಳ ಇದ್ದುವಂತೆ. ಯಾವನೋ ಕಳ್ಳನು ಎಲೆ ಕೊಯ್ಯಲು ಅಡಕೆ ಮರಹತ್ತಿ ಭೂತದಿಂದ ತಡೆಯಲ್ಪಟ್ಟವನಾಗಿ ಮೂರು ದಿನ ಅಲ್ಲಿಯೇ ಇದ್ದು, ಕಡೆಗೆ ಅಜ್ಜಯ್ಯನಿಂದ ಬದುಕಿದನಂತೆ! ಹೀಗೆಯೇ ಮತ್ತೊಂದು ಸಾರಿ ಮನೆಯನ್ನು ಕೊಳ್ಳೆಹೊಡೆಯಲು ದರೋಡೆ ಕಾರರು ಬಂದಾಗ ಭೂತನು ಮನೆಯಸುತ್ತಲೂ ತನ್ನ ಮಾಯೆಯಿಂದ ಸಾವಿರಾರೇಕೆ ಲಕ್ಷಾಂತರ ಪಂಜುಗಳನ್ನುರಿಸಿ ದರೋಡೆಕಾರರುಗಳಿಗೆ ಅರಿಗಳು ಅಮಿತವಾಗಿರುವರೆಂಬ ಭ್ರಾಂತಿಯನ್ನು ಹುಟ್ಟಿಸಿ ಅವರನ್ನು ಹೆದರಿಸಿ ಓಡಿಸಿದನಂತೆ. ಇಷ್ಟಾದರೂ ಮನೆಯವರೆಲ್ಲ ಗಾಢನಿದ್ರೆ ಯಲ್ಲಿದ್ದುದರಿಂದ ಒಬ್ಬರಿಗೂ ನಡೆದ ಸಂಗತಿ ಗೊತ್ತೇ ಆಗಲಿಲ್ಲವಂತೆ! ಅನಂತರ ಗೊತ್ತಾದುದು ಹೇಗೋ ಆ ಶಿವನೇ ಬಲ್ಲ.

ಮೊದಲು ಸತ್ಯದ ಕಾಲವಾಗಿದ್ದಾಗ ದಿನವೂ ಭೂತರಾಯನು ಮನೆಯ ಸುತ್ತ ಪಹರೆ ನೋಡಿಕೊಂಡು ಹೋಗುತ್ತಿದ್ದನಂತೆ. ತನ್ನ ಕಬ್ಬಿಣದ ದೊಣ್ಣೆಯಿಂದ ಹೆಬ್ಬಾಗಿಲಿಗೆ ಹೊಡೆದು ಅಜ್ಜಯ್ಯನನ್ನು

ಮಾತಾಡಿಸುತ್ತಿದ್ದನಂತೆ. "ಇದೇ ಭೂತರಾಯನು ಕಬ್ಬಿಣದ ದೊಣ್ಣೆ ಕುಟ್ಟುತ್ತಿದ್ದ ಬಂಡೆ" ಎಂದು ಈಗಲೂ ತೋಟದಲ್ಲಿರುವ ಒಂದು ಅರೆಯನ್ನು ತೋರಿಸುತ್ತಾರೆ. ಕೆಲವರು ಆ ಅರೆಯಲ್ಲಿರುವ ಒರಳು ಭೂತರಾಯನ ದೊಣ್ಣೆ ಬಡಿದೇ ಆದುದೆಂದು ಹೇಳುತ್ತಾರೆ. ಉಳಿದವರು ಅದನ್ನು ಖಂಡಿಸಿ ಅದು "ಕಲ್ಲುಕುಟಿಗ" ನೆಂಬ ಮತ್ತೊಂದು ದೆವ್ವದ ಕಾರ್ಯವೆಂದು ಸಾಧಿಸುತ್ತಾರೆ. ಈ ವಿವಾದವು ಅನಾದಿಯಾದುದು. ಅದರ ಸ್ವಭಾವ ನೋಡಿದರೆ ಅನಂತವಾದುದು ಎಂದೂ ಹೇಳಿಬಿಡಬಹುದು. ಹಳ್ಳಿಯ ವಿದ್ವಾಂಸರುಗಳು ವಾಕ್ಕಲಹಕ್ಕೆ ತೊಡಗಿದರೆ ತೀರ್ಮಾನದ ಬಾಬತ್ತೇ ಇಲ್ಲ. ನಿರ್ಣಯದ ಮಾತಂತೂ ಕೇಳಲೇಬಾರದು. (ನಗರದವರು?)

ಒಂದು ಸಾರಿ ಅಜ್ಜಮ್ಮ ರಾತ್ರಿ ಕೊಟ್ಟಿಗೆಗೆ ಹೋಗಿಬರುವಾಗ ಬಾವಿಕಟ್ಟೆಯ ಮೇಲೆ ಭೂತರಾಯನು ಶ್ವೇತಾಂಬರಧಾರಿಯಾಗಿ "ಆಕಾಶಕ್ಕೂ ಭೂಮಿಗೂ" ಒಂದಾಗಿ ನಿಂತಿದ್ದನಂತೆ. ಧೈರ್ಯಶಾಲಿಗಳಾದ ಅಜ್ಜಮ್ಮನವರೂ ಕೂಡ ಎದೆಹಾರಿ ಮೂರ್ಛೆಹೋದರಂತೆ.

ಪಾಠಕಮಹಾಶಯ, ಇಷ್ಟರಲ್ಲಿಯೇ ನಿನಗೆ ಭೂತದ ಮಹಿಮೆ ಗೊತ್ತಾಗಿರಬಹುದು, ಈ ಪ್ರಬಂಧವು ನಿನಗೆ "ತೋಟದಾಚೆಯ ಭೂತ" ವು ಅಸಾಧಾರಣವಾದುದು ಎಂಬ ಸತ್ಯವನ್ನು ಚೆನ್ನಾಗಿ ಮನಗಾಣಿಸದಿದ್ದರೆ ಅದು ಪ್ರಬಂಧದ ತಪ್ಪಲ್ಲ; ನಿನ್ನ ತಪ್ಪು. ನೀನು ಅತಿನವೀನನಾಗಿದ್ದೀಯೆ! ಅತ್ಯಾಧುನಿಕನು ಸದಾ ಸಂಶಯಾತ್ಮನು ಆದರೆ ಎಚ್ಚರಿಕೆ! "ಸಂಶಯಾತ್ಮಾ ವಿನಶ್ಯತಿ".

ನಾನೂ ನೀನೂ ನಂಬದಿದ್ದರೂ ಹಳ್ಳಿಯಲ್ಲಿ ಪ್ರತಿಯೊಬ್ಬನೂ ಭೂತದ ಮಹಿಮೆಯಲ್ಲಿ ನಮ್ಮಿಂದ ಗ್ರಹಿಸಲಸದಳವಾದ ನಂಬಿಕೆ ಇಟ್ಟಿದ್ದಾನೆ. ಭೂತದ ವಿಷಯವಾದ ಕತೆಗಳು ನಿಜವಾಗಿ ನಡೆದವೆಂದೇ ಅವನ ಬಲವಾದ ನಂಬಿಕೆ. ಹೆಚ್ಚೇನು? ಈ ನಂಬಿಕೆಯ ಮೇಲೇ ಅವನು ಜೀವಿಸುತ್ತಾನೆ. ನಿನಗೂ ನನಗೂ ಭೂತವೆಂದರೆ ಮಾತಿನ ಮಟ್ಟಿಗೆಷ್ಟೋ ಅಷ್ಟೆ! ನಮಗೆ ಅದೊಂದು ಪರಿಹಾಸ್ಯಮಾಡಿ ನಗಬಹುದಾದ ತೃಣವಿಷಯ. ಆದರೆ ಹಳ್ಳಿಯವನ ಜೀವನದಲ್ಲಿ ಭೂತವು

ಎಂದೆಂದಿಗೂ ಅಗಲಿಸಕೂಡದ ನಿತ್ಯವಾಗಿರುವ ಚಿರಾಂಶವಾಗಿದೆ. ಆದ್ದರಿಂದ, ಪಾತಕವುಹಾಕಯ, ಹಳ್ಳಿಯವನು ಮೂಢನೆಂದು ತಿರಸ್ಕರಿಸಬೇಡ. ಮುಕ್ಕಾಲುಪಾಲು ಜಗತ್ತನ್ನು ಮೌಢ್ಯವೇ ಕಾಪಾಡುತ್ತಿರುವುದು. ಮುಕ್ಕಾಲುಪಾಲು ಜಗತ್ತಿಗೆ ಮೌಢ್ಯವೇ ಆನಂದವಾಗಿರುವುದು.

ಜ್ಞಾನದೇವತೆಯೊಲಿಯದಾತನ ಮಧುರ ಮೌಢ್ಯವೆ ಹರಸಲಿ,
ಜ್ಞಾನಕೆಳಸಿ ತ್ರಿಶಂಕುವಾಗದ ತೆರದೊಳಾತನನಿರಿಸಲಿ.

---

# ಅಣ್ಣಪ್ಪನ ರೇಷ್ಮೆಕಾಯಿಲೆ

ಬೇಸಗೆಯ ನಡುಹಗಲು. ಬಿಸಿಯ ಬಿಸಿಲು ಹಸುರು ಮಲೆಗಳ ಮೇಲೆ ಹುಲುಸಾಗಿ ಮಲಗಿತ್ತು. ಹೆಗ್ಗೋಟೆಯ ಹೆಗ್ಗೋಡೆಗಳಂತೆ ಸುತ್ತಲೂ ಎತ್ತರವಾಗಿ ಎದ್ದ ಗಿರಿಗಳಿಂದ ಸಂಕುಚಿತವಾದಂತೆ ತೋರು ತ್ತಿದ್ದ ತಿಳಿಯಾಳದ ಬಾನಿನಲ್ಲಿ ಬೂರುಗದರಳೆಯಂತಿದ್ದ ತುಂಡುಮೋ ಡಗಳು ಸೋಮಾರಿಯ ಮೆದುಳಿನಲ್ಲಿ ಅಲೆದಾಡುವ ಕನಸುಗಳಂತೆ ತೇಲುತ್ತಿದ್ದುವು. ಹಕ್ಕಿಗಳು ಬಿಸಿಲಿನ ಬೇಗೆಗೆ ಬಸವಳಿದು ಮರಗಳಲ್ಲಿ ಮರೆಯಾಗಿ ಕನವರಿಸುವುವೋ ಎಂಬಂತೆ ಕಿಚಿಮಿಚಿ ಮಾಡುತ್ತಿದ್ದುವು. ಎಲ್ಲಿಯೋ ಒಂದು ಮರಕುಟಿಗನ ಹಕ್ಕಿಯು ಮಾತ್ರ ಅಡವಿಯ ಬಡಗಿ ಯಂತೆ ಕೊಟ್‌ಕೊಟ್ ಸದ್ದುಮಾಡುತ್ತಿತ್ತು. ನಾನು ಊಟ ಮುಗಿಸಿ ಕೊಂಡು ನಮ್ಮ ಮನೆಯ ಉಪ್ಪರಿಗೆಯಲ್ಲಿ ವಿಶ್ರಾಂತಿ ತೆಗೆದುಕೊ ಳ್ಳಲು ಹವಣಿಸುತ್ತಿದ್ದೆ. ಗಿ — ನನ್ನೊಡನೆ ಇದ್ದರು. ಅಷ್ಟರಲ್ಲಿ ಮಾಯನು ಓಡಿಬಂದು ಕಣ್ಣಿನಲ್ಲಿ ನೀರು ಸುರಿಸುತ್ತ "ಅಣ್ಣಪ್ಪನಿಗೆ ಕಾಯಿಲೆ ಜೋರಾಗಿದೆ. ಉಳಿಯುವಂತಿಲ್ಲ. ನಿಮ್ಮನ್ನು ಬರಹೇಳಿದ" ಎಂದನು. ನಾನು, ಗಿ—, ಇಬ್ಬರೂ ಉದ್ವೇಗದಿಂದ ಎದ್ದೆವು. ಪ್ರಕೃ ತಿಯು ಮಾತ್ರ ನಿಶ್ಚಿಂತ ಉದಾಸೀನವಾಗಿತ್ತು.

ಮಾಯ ಅಣ್ಣಪ್ಪನ ತಮ್ಮ. ಅಣ್ಣಪ್ಪ ನಮ್ಮ ಒಕ್ಕಲು. ಬಹಳ ವಿನೋದಶೀಲ ಅವನದು. ಸತ್ಯವಂತ, ಪ್ರಾಮಾಣಿಕ. ನಮ್ಮ ಹಿರಿ ಯರ ಕಾಲದಿಂದಲೂ ನಮ್ಮ ಗದ್ದೆ ಮಾಡಿಕೊಂಡು ಗುತ್ತಿಗೆಯನ್ನು ಸಲಿಸುತ್ತ ಯೋಗ್ಯನಾಗಿದ್ದ ಮನುಷ್ಯ. ಅವನದು ಯಾವಾಗಲೂ ನಗುಮುಖ. ಸಾಮಾನ್ಯವಾಗಿ ಬಡವರಲ್ಲಿ, ಅದರಲ್ಲಿಯೂ ಮಲೆನಾ ಡಿನ ಸಾಹುಕಾರರ ಗಾಣಕ್ಕೆ ಸಿಕ್ಕಿಬಿದ್ದಿರುವ ಬಡವರಲ್ಲಿ ಸುಲಭವಲ್ಲದ ನಗುಮುಖ. ನನಗಿನ್ನೂ ನೆನಪಿದೆ. ಅವನೊಂದು ದಿನ ಏನನ್ನೊ ಕಡೆಯುವ ಕೆಲಸದಲ್ಲಿದ್ದ. ಅವನಿಗೆ ಸಹಾಯವಾಗಿದ್ದವನು ಒಬ್ಬ ಚಿಕ್ಕ ಹುಡುಗ. ಬಹಳಹೊತ್ತು ಕೆಲಸ ಮಾಡಬೇಕಾದ್ದರಿಂದ ಹುಡು ಗನ ಉತ್ಸಾಹವು ಬತ್ತುವ ಸ್ಥಿತಿಗೆ ಬರಲು, ಅಣ್ಣಪ್ಪ ಕತೆ ಹೇಳಲು

ತೊಡಗಿದ. ಹುಡುಗನ ಕೈ ಚುರುಕಾಯಿತು. ನಾನು ಮರೆಯಲ್ಲಿದ್ದು ಆ ಕತೆಯನ್ನು ಆಲಿಸಿ ಬಹಳ ನಕ್ಕುಬಿಟ್ಟೆ. ಆ ಕಥೆ ಮತ್ತೇನೆಂತೆಂದೊಡೆ– ಒಂದೂರಿನಲ್ಲಿ ಒಬ್ಬನು ರಾತ್ರಿ ಮಲಗಿದ್ದಾಗ ಒಂದು ಓಡುಹುಳು ಅವನ ಕಿವಿಯೊಳಗೆ ನುಗ್ಗಿತಂತೆ. ಅದು ಕಿವಿಯನ್ನು ಕೊರೆದು ಕೊರೆದು ತಲೆಯನ್ನು ಪ್ರವೇಶಿಸಿತು. ಅಲ್ಲಿ, ಅದಾಗಲೇ ಗಬ್ಬವಾಗಿದ್ದುದರಿಂದ ಮರಿಹಾಕಿ ಸಂಸಾರ ಹೂಡಿತು. ತಾಯಿ ಮರಿಗಳಿಗೆ ಅವನ ಮಿದುಳೇ ಆಹಾರವಾಯಿತು. ಹೀಗೆ ಆ ಮರಿಗಳು ತಲೆಯ ತಿರುಳನ್ನು ತಿಂದು ತಿಂದು ಕಡೆಗೆ ಬರಿಯ ತಲೆಯೋಡು ಮಾತ್ರ ಉಳಿಯಿತು. ಆದರೂ ಆ ಮನುಷ್ಯನು ಎಂದಿನಂತೆ ಕೆಲಸ ಮಾಡುತ್ತಿದ್ದನಂತೆ. ಒಂದು ದಿನ ಒಬ್ಬ ಪೋಲೀಸಿನವನು ಅಲ್ಲಿಗೆ ಬಂದು ಅವನನ್ನು ಕೂಗಿದನಂತೆ. ಆ ಮನುಷ್ಯನು ಏನೋ ಕೆಲಸದ ಮೇಲಿದ್ದುದರಿಂದ ಬೇಗನೆ ಬರಲಾಗ ಲಿಲ್ಲ. ಪೋಲೀಸು ಮಹಾಶಯನಿಗೆ ಕೋಪ ಬಂದು ಗಟ್ಟಿಯಾಗಿ ರೇಗಿ ಕೂಗಲು ಆ ಮನುಷ್ಯನು ಭೀತಿಯಿಂದ ಹೊರಗೆ ಬಂದನಂತೆ. ಅವನು ಹೊರಗೆ ಬರಲು ಪೋಲೀಸಿನವನು "ಏನೋ! ಏಕೆ ಬರಲಿಲ್ಲ ವೋ ನಾನು ಕರೆದಕೂಡಲೇ?" ಎಂದು ಕೆನ್ನೆಗೆ ಬಲವಾಗಿ ಹೊಡೆದ ನಂತೆ. ಹೊಡೆಯಲು, ತಿರುಳಿಲ್ಲದ ಕರಟದಂತಿದ್ದ ಆ ತಲೆಬುರುಡೆಯು ದೇಹದ ಮೇಲಿಂದ ಉರುಳಿಬಿದ್ದು ಒಡೆದೇಹೋಯಿತಂತೆ!–ಇತ್ಯಾದಿ. ಈ ಕತೆಯನ್ನು ಕೇಳುತ್ತಿದ್ದ ಹುಡುಗನು ಬಿಲ್ಲುಂಬೆರಗಾಗಿ ಬಾಯಿ ತೆರೆದು ಕಣ್ಣರಳಿಸಿ ಅಣ್ಣಪ್ಪನ ಮುಖವನ್ನೇ ನೋಡುತ್ತಿದ್ದನು. ಸ್ವಲ್ಪ ಹೊತ್ತಾದ ಮೇಲೆ ಆ ಹುಡುಗನು "ಇದು ನಿಜವಾಗಿಯೂ ನಡೆದುದು ಹೌದೇನೋ, ಅಣ್ಣಪ್ಪಾ?" ಎಂದನು. ಅಣ್ಣಪ್ಪ ತಾನೇ ಆ ಕೇಸು ವಿಚಾರಣೆಯಾದಾಗ ಸಾಕ್ಷಿಹೇಳಿದ್ದೆ ಎಂದನು. ಹುಡುಗನು ಸುಮ್ಮನಾದನು. ನಾನು ನಗುತ್ತ ಹೊರಟುಹೋದೆನು. ಅಣ್ಣಪ್ಪ ಕತೆಗಾರನು ಹೌದೋ ಅಲ್ಲವೋ ತಿಳಿಯದು; ನಗೆಗಾರನೆಂಬುದೇನೋ ನಿರ್ವಿವಾದವಾದುದು.

ಅಣ್ಣಪ್ಪನ ಗುಡಿಸಲಿಗೂ ನಮ್ಮ ಮನೆಗೂ ಸುಮಾರು ನಾಲ್ಕು ಫರ್ಲಾಂಗುಗಳ ದೂರವಿರಬಹುದು. ನಾನು, ಗ— ಆ ಉರಿಬಿಸಿಲಲ್ಲಿ

ಹೊರಟೆವು. ನಮ್ಮ ಕೂಡೆ ಮಾಯನೂ ಖಿನ್ನವದನನಾಗಿ ಬರುತ್ತಿದ್ದನು. ಅವನೊಡನೆ ಕಾಯಿಲೆಯ ವಿವರಣೆ ಏನೆಂದು ಕೇಳಿದೆವು.

"ಎರಡು ವಾರದಿಂದ ನೆಲ ಹಿಡಿದಿದ್ದಾನೆ. ಎಲುಬು ಚರ್ಮ ಎರಡೆ ಇದೆ. ಆಗಾಗ ಬಾಯಲ್ಲಿ ರಕ್ತಕಾರುತ್ತಾನೆ. ಮೇಲುಸಿರೆಳೆಯುತ್ತಿದ್ದಾನೆ." ಎಂದು ವ್ಯಸನಸೂಚಕವಾದ ಸ್ವರದಿಂದ ಹೇಳಿದನು.

"ಔಷಧಿ ಏನು ಮಾಡಿದಿರಿ?"

"ಚೌಡಿಯ ಕಾಟ ಎಂದರು. ಭಟ್ಟರ ಹತ್ತಿರ ನಿಮಿತ್ತ ಕೇಳಿಸಿದ್ದಾಯಿತು. ಭಸ್ಮ ಕೊಟ್ಟರು; ಅದನ್ನು ತಿನ್ನಿಸಿದೆವು. ಆಮೇಲೆ ಪಂಜರೊಳ್ಳಿ ದೆವ್ವಕ್ಕೆ ಕೋಳಿ ಕೊಟ್ಟೆವು." ಎಂದು ಪ್ರಾರಂಭಿಸಿದನು. ನನಗೆ ರೇಗಿತು.

"ಔಷಧಿ ಏನು ಮಾಡಿದ್ದೀರಿ? ಎಂದು ಕೇಳಿದರೆ ಚೌಡಿ, ಭಟ್ಟ, ಭಸ್ಮ, ಕೋಳಿ! ಅಯ್ಯೋ ಮುಟ್ಠಾಳ! ಕಾಯಿಲೆಗೆ ಔಷಧಿ ಕೊಡಬಾರದೇನೋ" ಎಂದೆ.

"ಔಷಧಿಯನ್ನೂ ಕೊಟ್ಟರು" ಎಂದನು.

"ಯಾರು?" ಎಂದೆ.

"ನೆರೆಮನೆ ಮಂಜಣ್ಣ" ಎಂದನು.

ನನಗೆ ಇನ್ನೂ ಸಿಟ್ಟುಬಂದಿತು. ಮಲೆನಾಡಿನಲ್ಲಿ "ನನಗೆ ನಾನೇ ವೈದ್ಯನಾಗಿ ಬಿಟ್ಟೆ!" ಎಂದುಕೊಂಡು ಔಷಧಿ ಕೊಟ್ಟು ಅನೇಕ ರೋಗಿಗಳನ್ನು ವೈಕುಂಠಧಾಮಕ್ಕೆ ಕಳುಹಿಸುವವರು ಬಹಳಮಂದಿ ಇದ್ದಾರೆ. ಜನಗಳು ಕಾಯಿಲೆಯಾದರೆ ಮೊದಲು ದೆವ್ವಕ್ಕೆ ಹೇಳಿಕೊಳ್ಳುತ್ತಾರೆ. ಆಮೇಲೆ ಸರ್ವಜ್ಞಮೂರ್ತಿಗಳಾದ ಭಟ್ಟರು ಶಾಸ್ತ್ರಿಗಳು ಮುಂತಾದವರೊಡನೆ ನಿಮಿತ್ತ ಕೇಳಿಸಿ ಅವರು ಕೊಟ್ಟ ಬೂದಿಯನ್ನು ಹಚ್ಚುತ್ತಾರೆ; ಅಥವಾ ತಿನ್ನಿಸುತ್ತಾರೆ. ತರುವಾಯ ತನಗೆತಾನೇ ವೈದ್ಯನಾಗಿಬಿಟ್ಟ ಯಾವನೋ ಒಬ್ಬನಿಂದ ಏನೋ ಔಷಧಿ ಕೊಡಿಸುತ್ತಾರೆ. ಕಡೆಯಲ್ಲಿ ರೋಗಿಯು ಅಪರಿಹಾರ್ಯವಾದ ದುರವಸ್ಥೆಗಿಳಿದಮೇಲೆ ಆಸ್ಪತ್ರೆಗೆ ಓಡುತ್ತಾರೆ. ಡಾಕ್ಟರು ಏನಾದರೂ ಔಷಧಿ ಕೊಟ್ಟರೆ ಅದನ್ನೂ ಕುಡಿಸುತ್ತಾ, ತಮಗೆ ತಿಳಿದ ಮದ್ದುಗಳನ್ನೂ ತಿನ್ನಿಸುತ್ತಾ,

ದೆವ್ವ ಭೂತಗಳಿಗೆ ಹರಕೆ ಒಪ್ಪಿಸುತ್ತಾ, ಸಾಕಾದಷ್ಟು ಅಪಥ್ಯ ಮಾಡುತ್ತಾ, ಅದೃಷ್ಟವಶದಿಂದ ರೋಗಿ ಬದುಕಿದರೆ ಅದನ್ನು ಭಟ್ಟರ ಭಸ್ಮಕ್ಕೂ ದೆವ್ವದ ಕೃಪೆಗೂ ಆರೋಪಿಸಿ, ರೋಗಿ ಸತ್ತರೆ ಅದನ್ನು ಆಸ್ಪತ್ರೆ ಡಾಕ್ಟರ ಔಷಧಿಗೆ ಆರೋಪಿಸಿ, ತಮ್ಮ ಅನುಭವದ ಜ್ಞಾನಭಂಡಾರವನ್ನು ಇತರರಿಗೂ ಹಂಚುವರು. ಹೀಗೆ ಅವಿವೇಕವು ನಾಚಿಕೆಮುಳ್ಳಿನಂತೆ ಬೆಳೆಯುತ್ತ ಹೋಗುವುದು.

ನಾವು ಅಣ್ಣಪ್ಪನ ಗುಡಿಸಲನ್ನು ಸೇರಿದೆವು. ಕಿರುಜಗಲಿಯ ಕೆಸರುಹಲಗೆಯ ಮೇಲೆ ತೊಗಲು ಅಂಟಿದ ಎಲುಬಿನ ಗೂಡಿನಂತೆ ಅಣ್ಣಪ್ಪ ಮುದ್ದೆಯಾಗಿ ಮುದುರಿಕೊಂಡು ಕೂತಿದ್ದನು! ಮೈಮೇಲೆ ಬಟ್ಟೆಯಿಲ್ಲ. ಒಂದು ಚಿಂದಿ ಕಂಬಳಿಯು ಅವನಿಗೆ ಸ್ವಲ್ಪ ದೂರದಲ್ಲಿ ಮುದುರಿಬಿದ್ದಿತ್ತು. ತಲೆಕೂದಲು ಕೆದರಿ ವಿಕಾರವಾಗಿತ್ತು. ನನ್ನನ್ನು ನೋಡಿದ ಕೂಡಲೆ ಕೈಮುಗಿದು ಬಿಕ್ಕಿಬಿಕ್ಕಿ ಅಳಲು ತೊಡಗಿದನು. ಅವನಿಗೆ ಮಾತಾಡಲು ಉಸಿರೇ ಇರಲಿಲ್ಲ. ನೋಟವು ಭಯಾನಕವಾಗಿತ್ತು. ನನಗೆ ನಮ್ಮ ದೇಶದ ದಾರಿದ್ರ್ಯವೇ ಮೂರ್ತಿಮತ್ತಾಗಿ ನನ್ನೆದುರು ಬಂದಂತಾಯಿತು. ಹೊಟ್ಟೆಯ ಅಳಲನ್ನು ಹಾಗೆಯೇ ತಿಂದುಕೊಂಡು ಕೆಸರುಹಲಗೆಯಮೇಲೆ ಕುಳಿತುಕೊಳ್ಳಲು ಹವಣಿಸುತ್ತಿದ್ದೆ. ಅಷ್ಟರಲ್ಲಿ ಅಣ್ಣಪ್ಪ ಸಾತಾಳಧ್ವನಿಯಿಂದ "ಅಯ್ಯಾ ಮೇಲೆ ಕುಳಿತುಕೊಳ್ಳಿ" ಎಂದು ಅಲ್ಲಿದ್ದ ಒಂದು ಮೊರಡಾದ ಕಾಲುಮಣೆಯನ್ನು ತೋರಿಸಿದ. ನಾನು ಅದರ ಮೇಲೆ ಕುಳಿತುಕೊಂಡೆ. ಸ್ವಲ್ಪ ಹೊತ್ತು ಮಾತಾಡಲು ಬಾಯೇ ಬರಲಿಲ್ಲ.

ಲೋಕರೂಢಿಯ ದೃಷ್ಟಿಯಿಂದ ಎಷ್ಟೇ ಅಲ್ಪವಾದುದಾಗಲಿ ಎಷ್ಟೇ ಮಹತ್ತಾದುದಾಗಲಿ ಪ್ರತಿಯೊಂದು ವಸ್ತುವನ್ನೂ ಪ್ರತಿಯೊಂದು ಸನ್ನಿವೇಶವನ್ನೂ ವಿರಾಟ್‌ದೃಷ್ಟಿಯಿಂದ ನೋಡಲೆಳಸುವುದು ನನಗೊಂದು ಹುಚ್ಚು. ಹಾಗೆ ನೋಡಿದರೆ ಅಲ್ಪತ್ವ ಮಹತ್ವಗಳೆಲ್ಲ ಮಾಯವಾಗಿ ಸಮತ್ವವು ಮೂಡುತ್ತದೆ; ನಮ್ಮ ಅಹಂಕಾರವೂ ತಗ್ಗಿ ಅಣುವಿನಿಂದ ಹಿಡಿದು ಆಕಾಶದವರೆಗೂ, ಅಜ್ಞಾತವಾದ ಇರುವೆಯಿಂದ ಹಿಡಿದು ಜಗದ್ವಿಖ್ಯಾತನಾದ ಮಹಾತ್ಮನವರೆಗೂ, ಎಲ್ಲರೂ

ಎಲ್ಲವೂ ಮಹಿಮಾಮಯವಾಗಿ, ಅನಿರ್ವಚನೀಯವಾದ ಅಪಾರವಾದ ವಿಶ್ವವ್ಯೂಹದಲ್ಲಿ ಸರ್ವಸಮತ್ವದ ಮತ್ತು ಸರ್ವಮಹತ್ವದ ಅನುಭವ ವುಂಟಾಗಿ ಹೃದಯದಲ್ಲಿ ನಿಶ್ಚಲತೆಯೂ ಆನಂದವೂ ಶಾಂತಿಯೂ ಮೈದೋರುತ್ತವೆ. ಪ್ರತಿಯೊಂದು ವಸ್ತುವಿನ ಪೂರ್ಣ ಪ್ರಯೋಜನವು ವ್ಯಕ್ತವಾಗುವುದು ಅಂತಹ ವಿರಾಟ್‌ದೃಷ್ಟಿಯಿಂದಲೇ. ಸೃಷ್ಟಿಯೆಲ್ಲವೂ ಒಂದು ಮಹಾಜಾಲದಂತೆ ಎಂದೂ, ಪ್ರತಿಯೊಂದು ವಸ್ತುವೂ ಜಡವಾಗಿರಲಿ ಚೇತನವಾಗಿರಲಿ ಪರಸ್ಪರೋಪಜೀವಿಯೆಂದೂ ಅನೇಕ ಶತಮಾನಗಳ ಹಿಂದೆ ಮೃತ್ಯುಮುಖಿಯಾಗಿದ್ದ ರಾವಣನ ಆರ್ತನಾದವು ನಾಳೆ ಸಾಯಲಿರುವ ನೊಣವೊಂದರ ರೋದನಕ್ಕೂ ನಾಳೆ ಅರಳಲಿರುವ ಕುಸುಮವೊಂದರ ಸೌಂದರ್ಯಕ್ಕೂ ಹೇಗೋ ಸಂಬಂಧಪಟ್ಟಿದೆಯೆಂದೂ ನನ್ನ ದೃಢವಾದ ನಂಬುಗೆ. ಆದ್ದರಿಂದ ಬಣ್ಣಬಣ್ಣದ ಸಣ್ಣ ಹಕ್ಕಿಯೊಂದು ಯಾರೂ ಕಾಣದಂತೆ ಮಲೆನಾಡಿನ ಕಾಡಿನ ಒಂದು ಮರದಲ್ಲಿ ಕುಳಿತು ಪ್ರಾತಃಕಾಲದ ಸ್ವರ್ಣೋತ್ಸವದಲ್ಲಿ ಇಂಪಾಗಿ ಗಾನಗೈಯುತ್ತಿದ್ದರೆ ನಾನು ಆ ಸನ್ನಿವೇಶವನ್ನು ಸರ್ವಕಾಲ ಸರ್ವದೇಶ ರಚಿತವಾದ ವಿರಾಟ್‌ರಂಗದ ಭಿತ್ತಿಯಲ್ಲಿಟ್ಟು ನೋಡಿ ಕೇಳಿ ನಲಿಯುತ್ತೇನೆ. ಹಾಗೆ ಮಾಡುವುದರಿಂದ ಸನ್ನಿವೇಶದ ಮಹತ್ವವು ಸೂರ್ಮಡಿಯಾಗುತ್ತದೆ. ಅದು ಜಗತ್ತಿನಲ್ಲಿ ನಡೆಯುವ ಮಹತ್ಕಾಪಮಹದ್ವ್ಯಾಪಾರಕ್ಕೂ ಕೀಳಾಗುವುದಿಲ್ಲ. ಬ್ರಹ್ಮವ್ಯೂಹದಲ್ಲಿ ಷೇಕ್ಸ್ಪಿಯರಿನ ನಾಟಕರಚನೆಯು ಎಷ್ಟು ಮುಖ್ಯವೋ ಮೊನ್ನೆ ನಡೆದ ಘೋರ ಯುದ್ಧವು ಎಷ್ಟು ಅನಿವಾರ್ಯವೋ ಅದೂ ಅಷ್ಟೇ ಮುಖ್ಯ, ಅಷ್ಟೇ ಅನಿವಾರ್ಯ ಎಂಬುದು ನನ್ನ ನಂಬುಗೆ. ಭುವನ ಕವಿಯ ಭವ್ಯಸ್ವರಮೇಲದಲ್ಲಿ ರನ್ನನು ಒಂದು ಲಲಿತರಾಗವಾದರೆ ಗೂಬೆಯು ಕೂಡ ಒಂದು ಕೀಚುದನಿ!—ಅಣ್ಣಪ್ಪನ ಗುಡಿಸಲಿನಲ್ಲಿ ಕಾಲುಮಣೆಯ ಮೇಲೆ ಕುಳಿತು ಇಂತಹ ಸ್ವಪ್ನಸಮುದ್ರದಲ್ಲಿ ತೇಲತೊಡಗಿದೆನು. ಆ ಬಡವನ ರೋಗದ ವಿಷಮಾವಸ್ಥೆಯು ಭರತಖಂಡದ ಸ್ವಾತಂತ್ರ್ಯ ಸಂಗ್ರಾಮದಂತೆಯೇ ಮುಖ್ಯವಾಗಿ ಕಂಡಿತು. ಹೊರಗೆ ನೋಡಿದೆ. ಮಲೆನಾಡಿನ ಹೆಬ್ಬನ ಹೆಬ್ಬೆಟ್ಟಗಳು ಸಾಲುಸಾಲಾಗಿ ಅನಂತವಾಗಿ

ಹಬ್ಬಿದ್ದುವು. ಆ ಪರ್ಣಸಮುದ್ರದ ತರಂಗಗಳ ಮೇಲೆ ಸಡುಹಗಲ ಉರಿಬಿಸಿಲು ಪಸರಿಸಿತ್ತು. ಮೇಲೆ ಅನಂತವಾಗಿದ್ದರೂ ಸಾಂತವಾಗಿ ಕಾಣುತ್ತಿದ್ದ ನೀಲಾಕಾಶದಲ್ಲಿ ಅನೇಕ ಕೋಟಿ ಮೈಲಿಗಳ ದೂರದಲ್ಲಿ ಸೂರ್ಯನು ಹೊಳೆಯುತ್ತಿದ್ದನು. ಗುಡಿಸಲ ಕೊಳಕಾದ ಅಂಗಳದಲ್ಲಿ ತಿಪ್ಪೆಯ ಮೇಲೆ ಹೇಂಟೆಯೊಂದು ಮಣ್ಣನ್ನು ಕೆದರಿ ಕೆದರಿ ತನ್ನ ಹೂ ಮರಿಗಳಿಗೆ ತಿಂಡಿ ತಿನಿಸುತ್ತಿತ್ತು, ಹುಳು ಹುಪ್ಪಟೆಗಳನ್ನು! ತನ್ನ ಯಜಮಾನನ ರೋಗದ ವಿಚಾರ ಅದಕ್ಕೆ ಗೊತ್ತಾದಂತೆ ತೋರಲಿಲ್ಲ! ಕಂತ್ರಿ ನಾಯಿಯೊಂದು ಅಲ್ಲಿಯೇ ಪಕ್ಕದಲ್ಲಿ ಮಲಗಿ ಮೈಮೇಲೆ ಕುಳಿತು ಪೀಡಿಸುವ ನೊಣಗಳನ್ನು ಬಾಯಿಹಾಕಿ ಅಟ್ಟಿಕೊಳ್ಳುತಿತ್ತು. ಎದುರುಗಡೆ ಗದ್ದೆಯ ಬಯಲಿನಲ್ಲಿ ಕೆಲವು ಕಾಲ್ನಡೆಗಳು ಮೇಯುತ್ತಿದ್ದುವು. ಕಾಲದ ಆಳದಲ್ಲಿ ಮುಳುಗಿ ದೇಶದ ವಿಸ್ತಾರದಲ್ಲಿ ಸಂಚರಿಸಿದೆ. ಪುನಃ ವಿರಾಟ್‌ರಂಗದ ಭಿತ್ತಿಯಲ್ಲಿ ಅಣ್ಣಪ್ಪನ ರೇಷ್ಮೆ ಕಾಯಿಲೆಯನ್ನು ಚಿತ್ರಿಸಿದೆ—ಸಿಂಧುವಿನಲ್ಲಿ ಒಂದು ಬಿಂದು! ಈ ವಿಚಿತ್ರ ಸೃಷ್ಟಿಯ ಉದ್ದೇಶ, ಸುಖದುಃಖಗಳ ಅರ್ಥ, ಆ ಬಡವನೂ ಲೋಕ ರೂಢಿಯ ದೃಷ್ಟಿಗೆ ಅಲ್ಪನೂ ಆದ ಅಣ್ಣಪ್ಪನ ಜನ್ಮಜೀವಿತಗಳ ಉದ್ದೇಶ, ಅರ್ಥ;—ಏನೇನೋ ನೂರು, ಸಾವಿರ, ಲಕ್ಷ, ಕೋಟಿ ಭಾವನೆಗಳು 'ದರ್ಶನ'ದಲ್ಲಿ ಮಿಂಚಿದುವು. ನನಗೊಂದೂ ಬಗೆಹರಿಯಲಿಲ್ಲ. ನಮ್ರನಾದೆ; ದೀನನಾದೆ; ನಿಟ್ಟುಸಿರು ಬಿಟ್ಟು ಮುಂದಿನ ಕರ್ತವ್ಯಕ್ಕೆ ಸಿದ್ಧನಾದೆ. ಬತ್ತಲೆ ಕೂತಿದ್ದನು ಅಣ್ಣಪ್ಪ! ಅವನು ಕೂತಿದ್ದ ಎಂಬುದನ್ನು ಕೇಳಿ ನೀವು ಕಾಯಿಲೆ ಅಷ್ಟೇನೂ ಜೋರಾಗಿರಲಿಲ್ಲ ಎಂದು ತಿಳಿದುಬಿಟ್ಟೀರಿ. ಆಸ್ಪತ್ರೆಯಲ್ಲಾದರೆ ಅಂತಹ ರೋಗಿಯನ್ನು ಸ್ವಲ್ಪ ಅಲುಗಾಡಲೂ ಕೂಡ ಬಿಡರು. ಅವನನ್ನು ನೋಡಿದರೆ ಶ್ಮಶಾನಕ್ಕೆ ತಾನೇ ಹೊರಡಲು ಸಿದ್ಧನಾಗಿ ಕುಳಿತಂತೆ ತೋರುತಿತ್ತು. ನಾನು ಮಾಯನ ಕಡೆ ತಿರುಗಿ "ಇದೇನೋ ಇದು? ಅವನಿಗೆ ಮಲಗಲು ಹಾಸಿಗೆ ಇಲ್ಲವೇನೋ?" ಎಂದೆ. ಮಾಯ "ಹಾಸಿಗೆ ಬೇಡ ಎಂದ. ಬಹಳ ಉರಿಯಂತೆ." ಎಂದು ಅಲ್ಲಿ ಬಿದ್ದಿದ್ದ ಚಿಂದಿ ಕಂಬಳಿಯನ್ನೇ ಹಾಸಿದನು. ನಾನು ಅಣ್ಣಪ್ಪನಿಗೆ ಮಲಗಲು ಹೇಳಿದೆ. ಅವನು ಪುನಃ

ಆದೇ ಪ್ರೇತವಾಣಿಯೋ ಎಂಬಂತಿರುವ ಪಾತಾಳಸ್ವರದಿಂದ "ಅಯ್ಯಾ, ನಾನು ಸಾಯುತ್ತೇನೆ. ನನ್ನ ಸಾಲಕ್ಕೆ ನನ್ನ ಮನೆಯ ದನ ಕರು ಪಾತ್ರೆ ಎಲ್ಲದರ ಪಟ್ಟಿಯನ್ನು ತೆಗೆದುಕೊಳ್ಳಿ" ಎಂದನು. ನನಗೆ ಎದೆ ಯೊಡೆದಂತಾಯಿತು. "ಅದೆಲ್ಲಾ ಹಾಗಿರಲಿ! ನೀನು ಮಲಗಿಕೋ ಮೊದಲು" ಎಂದು ಗದರಿ ಹೇಳಿದೆ. ನನ್ನ ಬಲಾತ್ಕಾರಕ್ಕೆ ಮಲಗಿ ಕೊಂಡನು. ಅವನು ಮಲಗಿಕೊಂಡ ರೀತಿಯನ್ನು ನೋಡಿದರೆ ಮಲ ಗುವುದರಿಂದ ಏನೂ ಪ್ರಯೋಜನವಿಲ್ಲ ಎಂದು ಸಂಪೂರ್ಣವಾಗಿ ಹತಾ ಶನಾದಂತೆ ತೋರಿತು.

ನಾನು ಅವನ ಕಾಯಿಲೆಯ ಪ್ರಸ್ತಾಪವನ್ನು ತೆಗೆದರೆ ಅವನು ಸಾಲದ ಮಾತನ್ನೇ ತೆಗೆಯುತ್ತಿದ್ದನು. "ಅಯ್ಯಾ ನನ್ನ ಋಣ ತೀರಿ ದ್ದನ್ನು ನೋಡಿ ಸುಖವಾಗಿ ಸಾಯುತ್ತೇನೆ. ನನ್ನ ದನ ಕರು ಪಾತ್ರೆ ಎಲ್ಲ ಪಟ್ಟಿಮಾಡಿ" ಎಂಬುದೇ ಅವನ ಪಲ್ಲವಿಯಾಯಿತು. ಗಿ—ಯವ ರೂ ಬಹಳವಾಗಿ ಹೇಳಿದರು, ಸಾಲದ ಚಿಂತೆ ಬೇಡ ಎಂದು. ನಾನೂ ಹೇಳಿದೆ "ನೀನು ಸಾಯುವುದಿಲ್ಲ; ಏನೂ ಇಲ್ಲ. ಸುಮ್ಮನೇ ಮಲ ಗಿಕೋ. ಡಾಕ್ಟರಿಗೆ ನಾನೇ ಕಾಗದ ಬರೆದು ಔಷಧಿ ತರಿಸಿಕೊಡು ತ್ತೇನೆ" ಎಂದೆ. ನನ್ನ ಮಾತಿನ ಎರಡನೆಯ ಅಂಶವನ್ನು ನಂಬಿದನೇ ಹೊರತು ಮೊದಲನೆಯ ಭಾಗದಲ್ಲಿ ಅವನಿಗೆ ನಂಬುಗೆ ಇದ್ದಂತೆ ತೋರ ಲಿಲ್ಲ. ಕಡೆಗೆ ಅವನ ಕಾಟವನ್ನು ತಡೆಯಲಾರದೆ ಗಿ—ಯವರಿಗೆ ಹೇಳಿದೆ "ಒಂದು ಪಟ್ಟಿ ಮಾಡಿ" ಎಂದು. ಅವರೂ ಪಟ್ಟಿಯನ್ನು ಬರೆಯುವಂತೆ ನಟಿಸಿದರು. ನಡುನಡುವೆ ಅಣ್ಣಪ್ಪ ಮಾತನಾಡಲು ಯತ್ನಿಸಿದನು. ನಾನು ರೇಗಿದಂತೆ ನಟಿಸಿ ಅವನು ಸುಮ್ಮನೆ ಮಲಗು ವಂತೆ ಮಾಡಿದೆ. ಒಂದು ಬಟ್ಟೆಯನ್ನೂ ಹೊದಿಸುವಂತೆ ಮಾಡಿದೆ. ಏಕೆಂದರೆ ಅವನಿಗೆ ಬಂದಿದ್ದುದು ನ್ಯೂಮೋನಿಯಾ ಕಾಯಿಲೆ. ಅವನಿ ಗಿದ್ದ ಕಷ್ಟಸಹಿಷ್ಣುತೆ ಇಲ್ಲದಿದ್ದರೆ ಅವನಾಗಲೆ ಹೆಣವಾಗಿರಬೇಕಿತ್ತು. ಹಳ್ಳಿಗರಿಗೆ ಕಾಯಿಲೆಗಳಿಗಿರುವ ಜಾತಿಭೇದ ತಿಳಿಯದು. ಅವರಿಗೆ ನ್ಯೂಮೋನಿಯಾ ಆಗಲಿ, ಟೈಫಾಯ್ಡ್ ಆಗಲಿ, ಮಲೇರಿಯಾ ಆಗಲಿ, ಏನೇ ಆಗಲಿ ಎಲ್ಲವೂ ಬರಿಯ ಕಾಯಿಲೆ. ನ್ಯೂಮೋನಿಯಾವನ್ನು

ರೇಷ್ಮೆಕಾಯಿಲೆ ಎಂದು ಅವರಲ್ಲಿ ತಿಳಿದವರು ಕರೆಯುತ್ತಾರೆ. ಬಹುಶಃ "ಶ್ಲೇಷ್ಮ ಜ್ವರವು" "ರೇಷ್ಮೆಕಾಯಿಲೆ"ಯಾಗಿರಬೇಕೆಂದು ತೋರುತ್ತದೆ.

ಪಟ್ಟಿ ಬರೆಯುವ ನಾಟಕವನ್ನು ಪೂರೈಸಿ ಅವನಿಗೆ ಧೈರ್ಯ ಹೇಳಿ, ಬುದ್ಧಿ ಹೇಳಿದೆವು. ಅವನು ಏಳದಂತೆ ನೋಡಿಕೊಳ್ಳಬೇಕೆಂದು ಮಾಯಿಸಿಗೆ ಹೇಳಿದೆವು. ಕಡೆಗೆ ಡಾಕ್ಟರಿಗೊಂದು ವಿಶದವಾದ ಕಾಗದ ಬರೆದು ಒಬ್ಬ ಆಳನ್ನು ಔಷಧಿಗೆಂದು ಕಳುಹಿಸಿದೆವು. ಸಾಯಂಕಾಲ ಪುನಃ ಬಂದು ನೋಡುತ್ತೇವೆ ಎಂದು ಹೇಳಿ ಹೊರಟೆವು. ದಾರಿಯಲ್ಲಿ ಬರುತ್ತಾ ಅಣ್ಣಪ್ಪನಿಗಾಗಿ ಮನಸ್ಸಿನಲ್ಲಿಯೇ ನಮ್ರನಾಗಿ ಭಗವಂತನನ್ನು ಪ್ರಾರ್ಥಿಸಿದೆ. ಮನೆಗೆ ಬಂದ ಮೇಲೆ ರೋಗಿಯ ಪಥ್ಯಕ್ಕಾಗಿ ಕೆಲವು ಪದಾರ್ಥಗಳನ್ನು ಕಳುಹಿಸಿದೆವು.

ಸಾಯಂಕಾಲ ರೋಗಿಯನ್ನು ನೋಡಲು ಹೋದೆವು!. . . .

---

# ಮಲೆನಾಡಿನ ಗೋಪಾಲಕರು

ಮಲೆನಾಡಿನ ಗೋಪಾಲಕರು ದಿಟ್ಟರು; ಕೆಚ್ಚೆದೆಯಾಳುಗಳು, ಅಲ್ಲದೆ ಕಷ್ಟಸಹಿಷ್ಣುಗಳು. ಗಿರಿವನಗಳಲ್ಲಿ ಮಳೆಬಿಸಿಲೆನ್ನದೆ ಅಲೆದು ಅಲೆದು ಗಟ್ಟಿಮುಟ್ಟಾಗಿರುವರು. ಅವರ ಉಡುಪೆಂದರೆ, ಮೊಳಕಾಲು ಮೀರದ ಕೊಳಕಾದ ಪಂಚೆ ಒಂದು, ಯಾರಾದರೂ ಪುಣ್ಯಾತ್ಮರು ಧರ್ಮ ಮಾಡಿದ ಹರಕು ಅಂಗಿ ಒಂದು! ಇಷ್ಟೇ ಹೊರತು ಮತ್ತೇನೂ ಇಲ್ಲ. ಕಂಬಳಿಯೊಂದು ಮಾತ್ರ, ಹರಕಾಗಲಿ ಒಳ್ಳೆಯದಾಗಲಿ, ಇದ್ದೇ ಇರುವುದು. ಸೊಂಟಕ್ಕೆ ಒಡ್ಯಾಣವೆಂಬ ದಟ್ಟಿಯನ್ನು ಬಿಗಿಯುವರು. ಒಡ್ಯಾಣವು ಅವರ ಸ್ವಂತ ತಯಾರಿ. ಅದಕ್ಕೆ ಹಿಂಭಾಗದಲ್ಲಿ ಒಂದು ಕಬ್ಬಿಣದ ಕೊಂಡಿಯನ್ನಿಡುವರು. ಆ ಕೊಂಡಿಯಲ್ಲಿ ಅವರು ಸದಾ ತಮ್ಮ ಕೆಲಸದ ಕತ್ತಿ (ಖಡ್ಗವಲ್ಲ!)ಯನ್ನು ಸಿಕ್ಕಿಸಿಕೊಂಡೇ ಇರುವರು. ಅದಿಲ್ಲದೆ ಅವರು ಹೊರಗೆ ಹೊರಡುವುದೇ ಇಲ್ಲ. ಬಣ್ಣದಲ್ಲಿ ಅವರು 'ಸ್ವಲ್ಪ' ಕಪ್ಪು. ಮೊರಡಾದ ಅವರ ದೇಹವು ಅವರ ಜೀವನದ ಕಾಠಿಣ್ಯವನ್ನು ತೋರ್ಪಡಿಸುವುದು. ಆದರೂ ಅವರು ನಡೆನುಡಿಗಳಲ್ಲಿ ಅತಿ ವಿನಯರು! ಗರ್ವವಿಲ್ಲದವರು. ಅತ್ಯಾಶೆಯಿಲ್ಲದೆ ಬಂದುದನ್ನು ತಿಂದುಂಡು ಸುಖದಲ್ಲಿ ಕಾಲ ಕಳೆಯುವರಲ್ಲದೆ ಹಾಳು ವ್ಯಾಜ್ಯಗಳಿಗೆ ಕೈಹಾಕುವುದಿಲ್ಲ. ಅವರ ಜೀವನದ ಮಹಿಮೆಯು ಬ್ರಹ್ಮನಿಗೆ ತಿಳಿಯುವುದಲ್ಲದೆ ಬೇರೆ ಯಾರಿಗೂ ಚೆನ್ನಾಗಿ ಗೊತ್ತಾಗುವುದಿಲ್ಲ. ಅಂಥಾ ಸೌಜನ್ಯವು ಅವರಿಗೆ ಗೋವುಗಳ ಸಹವಾಸದಿಂದ ಬಂದಿದೆಯೋ ಏನೋ ಗೊತ್ತಾಗುವುದಿಲ್ಲ!

ಅವರು ದಿನದಿನವೂ ಬೆಳಿಗ್ಗೆ ಎದ್ದು ಗಂಜಿಯುಂಡು, ಹಾಲು ಕರೆದಮೇಲೆ ತುರುಗಳನ್ನೆಲ್ಲಾ ಮೇಯಿಸಲು ಹೊಡೆದುಕೊಂಡು ಹೋಗುವರು. ಪುನಃ ಅವರು ಹಿಂತಿರುಗುವುದು ಸುಮಾರು ಸಾಯಂಕಾಲ ಐದು ಗಂಟೆಗೆ. ಅಷ್ಟುಹೊತ್ತಿನವರೆಗೆ ದನಗಳನ್ನು ಹುಲ್ಲು ಹುಲುಸಾಗಿರುವ ಜಾಗಗಳಿಗೆಲ್ಲಾ ಹೊಡೆದುಕೊಂಡುಹೋಗಿ ಚೆನ್ನಾಗಿ ಮೇಯಿಸುವರು. ಬೇಸಗೆಯಲ್ಲಾದರೆ ನಡುಹಗಲಿನಲ್ಲಿ ಗೋವುಗಳ

ನ್ನೆಲ್ಲಾ ನೆರಳಿರುವ ತಂಪಾದ ಕಡೆಗೆ ಅಟ್ಟಿಕೊಂಡುಹೋಗಿ ಬಿಡುವರು. ಅಲ್ಲಿ ಅವುಗಳೆಲ್ಲಾ ಸ್ವಲ್ಪಹೊತ್ತು ಮಲಗಿ ಮೆಲುಕುಹಾಕುತ್ತಾ ವಿಶ್ರಮಿಸಿಕೊಳ್ಳುವುವು. ಹೀಗೆ ವಿಶ್ರಮಿಸಿಕೊಳ್ಳುವ ಸ್ಥಳವು ದಿನದಿನವೂ ಬದಲಾಯಿಸಲ್ಪಡುವುದಿಲ್ಲ; ಅದೊಂದು ವಂಶಪಾರಂಪರ್ಯವಾಗಿ ಬಂದ ಗೊತ್ತಾದ ಸ್ಥಳ. ಅದಕ್ಕೆ ಗೋಪಾಲಕರು ತಮ್ಮ ಪರಿಭಾಷೆಯಲ್ಲಿ "ತರುಬು ಗುಣಿ" ಎಂದು ಕರೆಯುವರು. ಇಂಥಾ 'ತರುಬು ಗುಣಿ' ಯನ್ನು ನೋಡಿದ ಕೂಡಲೇ ತಿಳಿದುಕೊಳ್ಳಬಹುದು; ಏಕೆಂದರೆ ಅಲ್ಲಿ ಒಂದು ಹಸುರು ಎಸಳಾದರೂ ಹುಟ್ಟಿರುವುದಿಲ್ಲ. ದನಗಳ ಗುಂಪು ಎಷ್ಟೋ ವರ್ಷಗಳಿಂದ ಮಲಗಿ ಮಲಗಿ ಆ ನೆಲವು ಕಾಲುದಾರಿಯಂತೆ ಸಂಪೂರ್ಣವಾಗಿ ಸವೆದಿರುತ್ತದೆ.

ಗೋವುಗಳು 'ತರುಬುಗುಣಿ'ಯಲ್ಲಿ ವಿಶ್ರಮಿಸಿಕೊಳ್ಳುತ್ತಿರುವಾಗ ಗೋಪಾಲಕರು ತಮ್ಮ ಸಾಂಪ್ರದಾಯಿಕ ಕಾರ್ಯಗಳನ್ನೆಸಗುವರು. [ಮಲೆನಾಡಿನ ಅರಣ್ಯಗಳಲ್ಲಿ ಹಣ್ಣು ಹಂಪಲುಗಳಿಗೇನು ಬರಗಾಲವಲ್ಲ. ಒಂದೊಂದು ಋತುವಿನಲ್ಲಿ ಒಂದೊಂದು ಬಗೆಯ ಫಲವಿದ್ದೇ ಇರುತ್ತದೆ. ಹಲಸಿನ ಹಣ್ಣು ಪ್ರಾಮುಖ್ಯವಾದುದು. ಅದು ಸಮೃದ್ಧಿಯಾಗಿ ಬೆಳೆಯುವುದು. ಎಲ್ಲಿ ನೋಡಿದರೂ ಹಲಸಿನ ಮರಗಳೆ! ಮುಂಗಾರು ಮಳೆಗೆ ಸ್ವಲ್ಪ ಮುಂಚೆಯೇ ಹಲಸಿನ ಫಲವು ಪ್ರಾರಂಭವಾಗುವುದು. ಅದಕ್ಕಿಂತಲೂ ಮುನ್ನ ಕಲ್ಲುಸಂಪಗೆ ಹಣ್ಣು, ಬೆಮ್ಮಾರಲಹಣ್ಣು, ಕಾಡು ಮಾವಿನ ಹಣ್ಣು ಇವೇ ಮೊದಲಾದುವು ಸಿಕ್ಕುವುವು.] ಒಬ್ಬನು ಮರಹತ್ತಿ ಒಂದು ಚೆನ್ನಾಗಿ ಬೆಳೆದ ಅಥವಾ ಹಣ್ಣಾದ ಹಲಸಿನ ಕಾಯನ್ನು ಕೆಡಹುವನು. ಎಲ್ಲರೂ ಸೇರಿ ಮರದ ನೆರಳಿನಲ್ಲಿ ತಮ್ಮ ತಮ್ಮ ಕಂಬಳಿಗಳನ್ನು ಹಸುರಿನ ಮೇಲೆ ಹಾಸಿ ಕುಳಿತುಕೊಳ್ಳುವರು. ಒಡ್ಯಾಣದಲ್ಲಿರುವ ಕತ್ತಿಯಿಂದ ಹಲಸಿನ ಕಾಯನ್ನು ಕೆತ್ತಿ ಅಥವಾ ಕೊಯ್ದು ಎಲ್ಲರೂ ಸಾವಕಾಶವಾಗಿ ತಿನ್ನುವರು. ತಿಂದಾದಮೇಲೆ ಕೊಳಲೂದುವರು. ಕೊಳಲು ಪ್ರತಿಯೊಬ್ಬ ಗೋಪಾಲಕನ ಪರಮ ಗೆಳೆಯ! ಅದಿಲ್ಲದಿದ್ದರೆ ದನ ಕಾಯುವ ಪದವಿಗೆ ಗೌರವ ಕಡಿಮೆ. ಆ ಕಾಡಿನ ಮಧ್ಯೆ ಕೊಳಲ ಗಾನವು ಎಷ್ಟು ಇಂಪಾಗಿ

ಕೇಳಿಬರುವುದೆಂದರೆ, ಅದನ್ನು ಆಲಿಸಿದವನಿಗೇ ಗೊತ್ತು!

ನಮ್ಮೂರಿನಲ್ಲಿ 'ಹಿರಗ' ಎಂಬ ದನ ಕಾಯುವವನಿದ್ದಾನೆ. [ಅವನ ನಿಜವಾದ ಹೆಸರು ಹಿರಿಯಣ್ಣ ಎಂದು. ಆದರೆ ಮೇಲುಜಾತಿಯವರು ಕೀಳುಜಾತಿಯವರನ್ನು 'ಹಿರಿಯಣ್ಣ' ಎಂದು ಕರೆಯಲು ಸಂಕೋಚ ಪಟ್ಟು 'ಹಿರಗ' 'ಹಿರಗ' ಎಂದು ಕರೆಯುವರು.] ಅವನು ದನ ಕಾಯುವವರಿಗೆಲ್ಲಾ ಮಾದರಿಯೂ, ಮಾರ್ಗದರ್ಶಿಯೂ ಆಗಿದ್ದಾನೆ. ಅವನ ದಿನಚರ್ಯೆಯೆಲ್ಲಾ ಇತರ ಗೋಪಾಲಕರಂತೆಯೇ ಇರುವುದು. ಅವನೂ ಬೆಳಗ್ಗೆ ಎದ್ದು ದನಗಳನ್ನು ಅಟ್ಟಿಕೊಂಡುಹೋಗಿ ಸಾಯಂ ಕಾಲ ಕೊಟ್ಟಿಗೆಗೆ ಹೊಡೆದುಕೊಂಡು ಬರುವನು. ಆದರೆ ಅವನಲ್ಲಿ ಒಂದು ವಿಧವಾದ ಓಜಸ್ಸಿರುವುದು. ಅದು ಎಲ್ಲರನ್ನೂ ಆಕರ್ಷಿಸು ವುದು. ಕೊಳಲೂದುವುದರಲ್ಲಿ ಆತನ ಸಮಾನರಿಲ್ಲವೆಂದೇನೋ ಪಕ್ಕದ ಹಳ್ಳಿಗಳಲ್ಲೆಲ್ಲಾ ಪ್ರಸಿದ್ಧಿಯಾಗಿದೆ. ಅದಕ್ಕೆ ನಾನೂ ಒಂದು ಸಾಕ್ಷಿ! ನಾನು ಏಕಾಂಗಿಯಾಗಿ ವನಗಳಲ್ಲಿ ಸಂಚರಿಸುತ್ತಿರುವಾಗ ದೂರದಿಂದ ನಲಿನಲಿದು ಇಂಪಾಗಿ ಮನವ ಮೋಹಿಸಿ ಬರುವ ಆತನ ವೇಣುನಾದ ವನ್ನು ನಿಷ್ಪಂದನಾಗಿ ನಿಂತು ಏಕಾಗ್ರಚಿತ್ತದಿಂದ ಎಷ್ಟೋ ಸಾರಿ ಆಲಿಸಿರುವೆನು. ಪಟ್ಟಣಗಳಲ್ಲಿ ಸಂಗೀತ ಶಾಸ್ತ್ರದಲ್ಲಿ ಕೋವಿದರೆನ್ನಿಸಿ ಕೊಂಡಿರುವವರು ಹಣ ಸಂಪಾದನೆಗಾಗಿ ನಡೆಯಿಸುವ ಸಂಗೀತ ಕಛೇರಿಗಳಿಗೆ ರೂಪಾಯಿಗಳನ್ನು ಕೊಟ್ಟು ಹೋಗಿ ಕೊಳಲನ್ನು ಕೇಳಿ ರುವೆನು! ಆದರೆ ಅವರ ವೇಣುನಾದವು ಹಿರಗನ ಕೊಳಲಗಾನದಂತೆ ನನ್ನನ್ನು ಮನಮೋಹಿಸಿಲ್ಲ; ಮೈಮರೆಯಿಸಿಲ್ಲ. ಹೃದಯವನ್ನು ತಳ ಮಳಗೊಳಿಸಿಲ್ಲ! ಭಾವಪರವಶನನ್ನಾಗಿ ಮಾಡಿಲ್ಲ. ಆನಂದ ಬಾಷ್ಪ ಗಳನ್ನು ಸುರಿಸಿಲ್ಲ.

'ಹಿರಗ'ನನ್ನು ದೊಡ್ಡವರು ಆದರಿಸುವುದಂತೂ ಇರಲಿ. ಮಕ್ಕ ಳಿಗೆ ಅವನಲ್ಲಿ ಇಲ್ಲದ ಸಲಿಗೆ. ಬೆಳಗ್ಗೆ ಹಿರಗ 'ದನ ಬಿಡ'ಲು ಬಂದನೆಂ ದರೆ ಸರಿ, ಹುಡುಗರೆಲ್ಲಾ ಅವನನ್ನು ಮುತ್ತಿಕೊಳ್ಳುವರು. ಮೇಲು ಜಾತಿಯವರು ಕೀಳು ಜಾತಿಯವನನ್ನು ಮುಟ್ಟಬಾರದೆಂಬ ನಿಯಮ ವಿದ್ದರೂ ಹುಡುಗರು ಅದನ್ನು ಉಲ್ಲಂಘಿಸದೆ ಬಿಡುವುದಿಲ್ಲ. ದೇವರ

ರಾಜ್ಯದವರಾದ ಮಕ್ಕಳು ಸೈತಾನನ ಅನುಯಾಯಿಗಳಾದ ದೊಡ್ಡವರ ಮತಭೇದವನ್ನೇನೆಂದು ಬಲ್ಲರು! ಮಕ್ಕಳಿಗೆ ಪ್ರೇಮವೇ ಜಾತಿಯನ್ನು ನಿರ್ಣಯಿಸುವ ಸಾಧನ. ಯಾರು ಹೆಚ್ಚಾಗಿ ತಮ್ಮನ್ನು ಪ್ರೀತಿಸುತ್ತಾರೊ ಅವರೇ ಉತ್ತಮ ಜಾತಿಯವರು. ಯಾರು ತಮ್ಮನ್ನು ಪ್ರೀತಿಸುವುದಿಲ್ಲವೋ ಅವರೇ ಅಧಮ ಜಾತಿಯವರು! 'ಹಿರಗ'ನಿಗೂ ಹುಡುಗರನ್ನು ಕಂಡರೆ ಬಲು ಪ್ರೀತಿ. ಅವನು ಯಾವುದಾದರೂ ಒಂದು ಹೊಸ ಕರುವಿಗೆ ನಾಮಕರಣ ಮಾಡಬೇಕಾದರೆ ಮಕ್ಕಳನ್ನೇ ಕೇಳುವನು. ಅವರು ಹೇಳಿದ ಹೆಸರನ್ನೇ ಆ ಕರುವಿಗೆ ಇಡುವನು ಮಕ್ಕಳೂ ಅವನಿಗೆ ಅನೇಕ ಕೆಲಸಗಳನ್ನು ಹಚ್ಚುತ್ತಿದ್ದರು. ಒಬ್ಬನು! ''ಹಿರಗಾ ನನಗೊಂದು ಕೊಳಲು ಬೇಕು'' ಮತ್ತೊಬ್ಬನು ''ನನಗೊಂದು ಬುಗುರಿ'' ಇನ್ನೊಬ್ಬನು ನನಗೊಂದಿಷ್ಟು ಕಲ್ಲುಸಂಪಗೆ ಹಣ್ಣು!'' ಮಗದೊಬ್ಬನು ''ನನಗೊಂದು ಪೆಟ್ಲು'', [''ಪೆಟ್ಲು''ಎಂದರೆ ಸಣ್ಣ ರಂಧ್ರವುಳ್ಳ ಬಿದಿರಿನಿಂದ ಮಾಡಿದ ಒಂದು ಆಟದ ಕೋವಿ. ಸಣ್ಣ ತೂತುಳ್ಳ ಸುಮಾರು ಒಂದಂಗುಲ ದಪ್ಪದ ಬಿದಿರನ್ನು ಒಂದು ಗೇಣುದ್ದ ಕಡಿದು ಅದಕ್ಕೊಂದು 'ಗಜ'ವನ್ನು ಮಾಡುವರು. 'ಗಜ'ವೆಂದರೆ ಅದೇ ಬಿದಿರಿನ ತುಂಡನ್ನು ಎರಡಂಗುಲ ಕಡಿದು ಅದಕ್ಕೆ ಒಂದುಗೇಣು ಎರಡಂಗುಲದುದ್ದ, ಬಿದಿರಿನ ರಂಧ್ರದ ಗಾತ್ರವುಳ್ಳ, ಬಲವಾದ ಕಡ್ಡಿಯೊಂದನ್ನು ಜೋಡಿಸುವರು. ಉದ್ದವಾದ ಬಿದಿರಿನ ತೂತಿನಲ್ಲಿ ಒಂದು ಅರಮರಲಕಾಯಿಯನ್ನಾಗಲಿ ಜುಮ್ಮನಕಾಯಿಯನ್ನಾಗಲಿ ಇಟ್ಟು 'ಗಜ'ದಿಂದ ನೂಕುವರು. ಆ ಕಾಯಿ ಬಂದು ಅದರ ಅಗ್ರಭಾಗದಲ್ಲಿ ಗಾಳಿಯಾಡದಂತೆ ಬಿಗಿದು ನಿಲ್ಲುವುದು. ಹಾಗೆಯೇ ಗಜವನ್ನು ಹಿಂದಕ್ಕೆ ಎಳೆದು ರಂಧ್ರಕ್ಕೆ ಮತ್ತೊಂದು ಬಿಗಿಯಾದ ಕಾಯನ್ನು ಹಾಕಿ ಗಜದಿಂದ ನೂಕಿದರೆ ಒಳಗಿನ ಗಾಳಿಯು ಒತ್ತಡದಿಂದ ಅಗ್ರಭಾಗದ ಕಾಯಿಯು ಹಾರಿ 'ಟಾಪ್' ಎಂಬ ದೊಡ್ಡ ಶಬ್ದವಾಗುವುದು. ಈ ಯಂತ್ರಕ್ಕೆ 'ಪೆಟ್ಲು' ಎಂದು ಹೆಸರು.] ಮತ್ತೊಬ್ಬನು ''ಹಿರಗಾ! ಬಿಲ್ಲು ಮರೆತೀಯೊ'', ಹೆಣ್ಣುಮಕ್ಕಳಾದರೆ ''ಹಿರಗಾ ಸೀತಾಳಿದಂಡೆ ಹೂ ತೆಗೆದುಕೊಂಡು ಬಾರೊ'' ''ಕೇದಗೆ ಹೂ

ಮರೆಯಬೇಡೊ" ಹೀಗೆ ಎಲ್ಲರೂ ಒಂದೊಂದು ಕೆಲಸ ಹೇಳುವರು. ಅವನಂತೂ ಒಂದಕ್ಕೂ 'ಇಲ್ಲ' ಎನ್ನುವುದೇ ಇಲ್ಲ. ಎಲ್ಲದಕ್ಕೂ 'ಹುಂ' ಎನ್ನುವನು. ಅವನ ಕೈಯಲ್ಲಾದವುಟ್ಟಿಗೂ ತಂದುಕೊಡು ವನು. ಅಂತೂ ಪ್ರತಿ ದಿನ ಸಾಯಂಕಾಲ ಒಬ್ಬರಲ್ಲ ಒಬ್ಬರಿಂದ ಅವ ನಿಗೆ ಬೈಗುಳ ತಪ್ಪುವುದಿಲ್ಲ.

'ಹಿರಗ'ನಿಗೊಂದು ನಾಯಿಯಿದೆ; ಅವನು ಅದರ ಬಾಲ ಕಡಿದಿ ದ್ದಾನೆ. ಯಾರಾದರೂ ಅದು ಎಂಥಾ ನಾಯಿ ಎಂದರೆ ಹಿರಗನು ಸ್ವಲ್ಪವೂ ಸಂಕೋಚಪಡದೆ ಧೈರ್ಯವಾಗಿ "ಚೀನಿ ನಾಯಿ" ಎನ್ನುವನು. ನಿಜವಾಗಿಯೂ ಅದೇನೊ ಕಂತ್ರಿ ನಾಯಿಯೆ. ಅವನು ಮಾತ್ರ ಅದು ಜಾತಿ ನಾಯಿಯೇ ಹೌದೆಂಬ ಹುಸಿನಂಬಿಕೆಯನ್ನಿಟ್ಟುಕೊಂಡಿರು ವನು. ಬಾಲ ಕಡಿದ ನಾಯಿಗಳೆಲ್ಲಾ 'ಚೀನಿ ನಾಯಿ'ಗಳೇ ಆಗುವು ವೆಂದು ಆತನ ಸಿದ್ಧಾಂತ. ಇದು ಅವನೊಬ್ಬನ ನಂಬಿಕೆಯೇ ಅಲ್ಲ. ಹೆಚ್ಚು ಕಡಿಮೆ ನಮ್ಮೂರು ಮತ್ತು ಅದರ ಸುತ್ತುಮುತ್ತಲಿನ ಊರಿ ನವರ ಅಭಿಪ್ರಾಯವೆಲ್ಲಾ ಹಾಗೆಯೇ ಇದೆ. ಹೀಗಾಗಲು ಒಂದು ಕಾರಣವುಂಟು. ಮೊದಮೊದಲು ಬೆಂಗಳೂರಿನಿಂದ ಜಾತಿ ನಾಯಿ ಗಳನ್ನು ತಂದಾಗ ಅವುಗಳೊಂದಕ್ಕೂ ಬಾಲವೇ ಇರಲಿಲ್ಲ! ಅಂದರೆ ಬಾಲವೇ ಸ್ವಾಭಾವಿಕವಾಗಿ ಇರಲಿಲ್ಲವೆಂತಲ್ಲ; ಕತ್ತರಿಸಲ್ಪಟ್ಟಿದ್ದಿತು ಎಂದರ್ಥ! ಹೀಗೆ ಪಟ್ಟಣಗಳಿಂದ ನಾಯಿಗಳನ್ನು ಕೊಂಡುಕೊಂಡು ಬರುವವರೆಲ್ಲಾ ಬಾಲ ಕಡಿದ ನಾಯಿಗಳನ್ನೇ ವಿಶೇಷವಾಗಿ ತರುತ್ತಿ ದ್ದುದರಿಂದ ಸಾಮಾನ್ಯ ಜನರಲ್ಲಿ ಬಾಲ ಕಡಿದ ನಾಯಿಗಳೆಲ್ಲ ಜಾತಿ ನಾಯಿಗಳಾಗುವುವೆಂಬ ಹುಸಿನಂಬಿಕೆಯುಂಟಾಯಿತು. ಎಲ್ಲರಿಗೂ 'ಚೀನಿ ನಾಯಿ'ಗಳನ್ನು ಇಡಬೇಕೆಂಬ ಕುತೂಹಲವುಂಟಾದುದರಿಂದ ನಮ್ಮೂರ ನಾಯಿ ಬಾಲಗಳಿಗೆ ಕಾಲ ಬಂದಿತು. ಪ್ರತಿಯೊಬ್ಬರೂ ತಮ್ಮ ತಮ್ಮ ನಾಯಿಗಳ ಬಾಲಗಳನ್ನು ತುಂಡುಮಾಡಲಾರಂಭಿಸಿ ದರು. ಈ ತಿಳಿಗೇಡಿತನದ ಅಭ್ಯಾಸವು ಹರಡಿ ಎಷ್ಟರಮಟ್ಟಿಗೆ ಮುಂದು ವರಿಯಿತೆಂದರೆ, ಕೆಲದಿನಗಳಲ್ಲಿ ನಮ್ಮ ಪ್ರಾಂತದಲ್ಲಿ ಬಾಲವಿರುವ ನಾಯಿಯ ದರ್ಶನವೇ ಅಪರೂಪವಾಯಿತು. ಕಡೆಕಡೆಗೆ ಬಾಲದ

ನಾಯಿಯೆಂದರೆ ಕೌತುಕವಾಗಿಯೂ ಪರಿಣಮಿಸಿತು. ಇದೇನೋ ಹಳ್ಳಿಯ ವಿಪ್ಲುತನವಾಯಿತು! ಪುರಜನರ ಮರುಳಾಟವನ್ನೇನೆಂದು ಹೇಳಬೇಕು? ಮೊದಮೊದಲು ವಿದ್ಯಾವಂತರಾದ ಕೆಲವರು ಪಾಶ್ಚಾತ್ಯರ ಉಡುವು ತೊಟ್ಟದ್ದನ್ನು ಕಂಡು, ಆಮೇಲೆ ಪಾಶ್ಚಾತ್ಯರಂತೆ ಪೋಷಾಕು ಹಾಕಿಕೊಂಡವರೆಲ್ಲಾ ನಾಗರಿಕರೆಂಬ ಭಾವನೆಯು ಪಟ್ಟಣಿಗರಲ್ಲಿ ಹುಟ್ಟಿ ಅನರ್ಥಕಾರಿಯಾಗಲಿಲ್ಲವೆ? ಹಾಗೆಯೇ ಹಳ್ಳಿಯವರು ಬಾಲ ಕಡಿದ ನಾಯಿಗಳ ವಿಚಾರವಾಗಿ ಮೋಸಹೋದರು.

ಹಿರಗನ ನಾಯಿಯಂತೂ ಪೂರಾ ಕಂತ್ರಿ! ಬಾಲವಿದ್ದಿದ್ದರಾದರೂ ಸ್ವಲ್ಪ ನೋಡಲು ಲಕ್ಷಣವಾಗಿಯಾದರೂ ಇರುತ್ತಿದ್ದಿತು. ಬಾಲವಿಲ್ಲದೆ ಅದು ನೋಡುವುದಕ್ಕೆ ಅತಿ ವಿಕಾರವಾಗಿದ್ದಿತು. ಅದರಲ್ಲಿಯೂ ನನ್ನೂರಿನವರಿಗೆ ಬಾಲ ಕಡಿಯುವುದಕ್ಕೆ ಅಳತೆ ಪ್ರಮಾಣಗಳು ಒಂದೂ ಇಲ್ಲ. ಕೆಲವು ನಾಯಿಗಳ ಬಾಲವನ್ನು ನೋಡಿ ನಾನು ಎಷ್ಟೋ ಸಾರಿ ಆಳ್ಳಿ ಹಿಡಿಯುವವರೆಗೂ ನಕ್ಕುಬಿಟ್ಟಿದ್ದೇನೆ. ಕೆಲವು ನಾಯಿಗಳಿಗೆ ಬಾಲವಿತ್ತೆಂದೇ ಗೊತ್ತಾಗುವುದಿಲ್ಲ, ಅಷ್ಟು ಬುಡಕ್ಕೆ ಸರಿಯಾಗಿ ಕಡಿಯುವರು. ಕೆಲವು ನಾಯಿಗಳಿಗೆ ಬಾಲ ಕಡಿದಿರುವರೆಂದೇ ತಿಳಿಯುವುದಿಲ್ಲ, ಅಷ್ಟು ಸ್ವಲ್ಪವೇ ಕಡಿಯುವರು. ಈಚೀಚೆಗೆ ಬಾಲ ಕಡಿಯುವುದು ತಿಳಿಗೇಡಿತನವೆಂದು ತಿಳಿದಮೇಲೆ ಕೆಲವು ಅಪಹಾಸ್ಯಕ್ಕೀಡಾಗಲಾರದ ನಿಪುಣರು ತಮ್ಮದೇ ಒಂದು ನೂತನ ಉಪಪತ್ತಿಯನ್ನು ಕೊಟ್ಟು ಒಂದು ನೂತನ ಸಿದ್ಧಾಂತವನ್ನು ಪ್ರಚುರಪಡಿಸಿರುವರು. ಅದೇನೆಂದರೆ, ಬಾಲ ಕಡಿದ ನಾಯಿಗಳು ಚೆನ್ನಾಗಿ ಓಡುವುವಂತೆ. ಬಾಲವಿದ್ದರೆ ಅವುಗಳಿಗೆ ಒಂದು ವಿಧವಾದ ಅಡಚಣೆಯಾಗುವುದಂತೆ. ಇದನ್ನು ಸಾಧಿಸಲಿಕ್ಕೆ ಅವರು ಕೊಡುವ ಉಪಮಾನ ಯಾವುದೆಂದರೆ, ಎತ್ತಿಗೆ ಕಟ್ಟುವ ಲಾಳ! ನಾಯಿಯ ಬಾಲಕ್ಕೂ ಎತ್ತಿನ ಲಾಳಕ್ಕೂ ಇರುವ ಸಂಬಂಧವು (ನನ್ನ ಅಲ್ಪ ಬುದ್ಧಿಗೆ) ಅತೀತವಾಗಿದೆ!

'ಹಿರಗ'ನು ಬಾಲ ಕಡಿದು ಚೀನಿಯನ್ನಾಗಿ ಮಾಡಿದ ತನ್ನ ಕಂತ್ರಿ ನಾಯಿಗೆ ಇಂಗ್ಲೀಷು ಹೆಸರಿಡಬೇಕೆಂದು ಯಾರನ್ನೊ ಕೇಳಿದನಂತೆ. ಅದಕ್ಕೆ ಅವರು 'ರಾಸ್ಕಲ್' (Rascal) ಎಂದು ಹೆಸರಿಡು ಎಂದರಂತೆ.

ಈಗ ಆ ಹೆಸರು ಯಾವ ಯಾವ ಅವಸ್ಥೆಗಳನ್ನೆಲ್ಲಾ ದಾಟಿ 'ರಾಸಿಕಲ್ಲ ಎಂದಾಗಿದೆ. ಮುಂದೆ ಅದರ ಪರಿಣಾಮವೇನಾಗುವುದೋ ಬಲ್ಲ ರಾರು? ನಾಯಿ ಸಾಕಿದ ಪ್ರತಿಯೊಬ್ಬರಿಗೂ ಇಂಗ್ಲೀಷು ಹೆಸರಿ ಹುಚ್ಚು. ನಿರಕ್ಷರಕುಕ್ಷಿಯು ಕೂಡ ತನ್ನ ನಾಯಿಗಳಿಗೆ 'ಟೈಗರ್' 'ಡೈಮಂಡ್' 'ನೆಟ್ಲ್' 'ರುಬೀ' 'ರೋಸ್' ಎಂದು ಹೆಸರಿಡುವನ 'ಹಂಡ' 'ಕೆಂಪ' ಮೊದಲಾದ ಹಳ್ಳಿಯ ಹೆಸರುಗಳು ಯಾರ ಮ ಸ್ಸಿಗೂ ಬರುವುದಿಲ್ಲ. ಈ ತೆರದ ಹುಚ್ಚಿಗೆ ಆಸ್ಪತ್ರೆಯಾದರೂ ಇ ವುದೆಲ್ಲಿ?

ಹಿರಗನು ದನ ಕಾಯಲು ಹೋಗುತ್ತಾ ಈ ನಾಯಿಯನ ಸಂಗಡ ಕರೆದುಕೊಂಡು ಹೋಗುವನು. ಅದು ಯಾವಾಗಲೂ ಅ ಸನ್ನು ಕಾಡಿನಲ್ಲಿಯೇ ಬಿಟ್ಟು ಮನೆಗೆ ಪರಾರಿಯಾಗುವುದಿಲ್ಲ. ಕಂ ನಾಯಿಯಾದರೂ ಚುರುಕಾಗಿದೆ. ಕೆಲವರಿಗೆ ನಾಡ ನಾಯಿಗಳೆಂದ ಬಹು ಅಲಕ್ಷ್ಯ! ತಿರಸ್ಕಾರ! ದುಡ್ಡು ಕೊಟ್ಟು ತಂದ ಚೀನಿ ನಾಂ ಗಳೆಂದರೆ ಅತ್ಯಾದರ! ಇದೊಂದು ಮೂರ್ಖತನದ ದುರಾಗ್ರಹ ಪಟ್ಟಣಗಳಿಂದ ತಂದ ಕೆಲಸಕ್ಕೆ ಬಾರದ ಚಂದದ ಜಾತಿ ನಾಯಿಗಳನ ನಾನು ಎಷ್ಟೋ ನೋಡಿದ್ದೇನೆ. ಕಾಡೆಂದರೆ ಅವುಗಳಿಗೆ ಪುರಜ ಗಿರುವಂತೆಯೇ ಮಹಾ ಭಯ. ಬಂದೂಕಿನ ಶಬ್ದವೆಂದರೆ ಅವು ಜೀವವೇ ಹಾರುವುದು! ಪ್ರಾಣವು ನೆತ್ತಿಗೇರುವುದು. ನಾಡನಾಂ ಗಳಾದರೊ ಕಾಡಿಗೆ ಸ್ವಲ್ಪವೂ ಭಯಪಡುವುದಿಲ್ಲ. ಕೋವಿಂ ಗುಂಡು ಹಾರಿದಲ್ಲಿಗೆ ಹೋಗಿ ಹಾಜರಾಗುವುವು. ಆದರೂ ಅವ ಳನ್ನು ಅಲ್ಲಗಳೆಯುವುದು ಮುಖ ನೋಡಿ ಮಣೆ ಕೊಡುವಂತೆ ಶು ಮೂರ್ಖತನ! ಜಾತಿ ನಾಯಿಗಳ ಡೌಲಿಗೆ ನಾವೇಕೆ ಮೋಹಪ ಬೇಕು? ಅವು ಪುರದ ರಾಜಬೀದಿಗಳಲ್ಲಿ ಸಾಯಂಕಾಲ ಸಂಚಾ ಹೊರಡುವ ಸೊಗಸುಗಾರ ಪುಟ್ಟಸಾಮಿಗಳ ಸಂಗಡ ಬೀದಿಯ ಒಂ ಕಡೆಯಿಂದ ಇನ್ನೊಂದು ಕಡೆಗೆ ಓಡಾಡುತ್ತಾ, ಹೆಣ್ಣು ನಾ ಗಳನ್ನು (ಒಡೆಯನ ಗುಣವೇ ಆಳಿಗೂ ಅಲ್ಲವೆ?) ಗೊತ್ತುಹಚ್ಚುತ

ಗಳಲ್ಲಿರುವ ಉಗ್ರ ಜಂತುಗಳನ್ನು ಬೇಟೆಯಾಡಬಲ್ಲುವೇ? ಇರಲಿ; ಸಾಡನಾಯಿಗಳೇನು ನೋಡುವುದಕ್ಕೆ ಅಂದವಾಗಿರುವುದಿಲ್ಲವೇ? ಕೆಲವಂತೂ ಜಾತಿ ನಾಯಿಗಳನ್ನು ರೂಪದಲ್ಲಿ ಮಿಾರಿಸುವುವು. ಹಾಗೆಂದ ಮೇಲೆ ಜಾತಿ ನಾಯಿಗಳ ಗುಣಪ್ರಶಂಸೆಯು ದುರಾಗ್ರಹಜನಿತವಾದು ದೆಂದೇ ಹೇಳಬೇಕು.

ಹಿರಗನ ನಾಯಿಯು ತುಂಬಾ ಧೈರ್ಯಶಾಲಿ. ಅವನೇ ಅದರ ಸಾಹಸಕೃತ್ಯಗಳನ್ನು ವರ್ಣಿಸುವನು. ನನಗೂ ಒಂದು ದಿನ ಅದರ ವಿಚಾರ ಹೇಳಿದನು. ನನಗೇನೊ ಅವನ ವರ್ಣನೆಯಲ್ಲಿ ಉತ್ಪ್ರೇಕ್ಷೆ ಯಿದೆಯೆಂದು ಗೊತ್ತಾದರೂ ಅವನ ಮನಸ್ಸು ನೋಯಿಸಬಾರ ದೆಂದು ನಾನೂ ಅವನ ನಾಯಿಯನ್ನು ಮತ್ತಷ್ಟು ಹೊಗಳಿದೆನು! ಅವನೂ ಪಕ್ಕದಲ್ಲಿಯೇ ನಿಂತಿದ್ದ ತನ್ನ ಮೋಟು ಬಾಲದ 'ಚೀನಿ' ಯನ್ನು ತಲೆತಟ್ಟಿ ಮುದ್ದಿಸಿದನು.

ಇದುವರೆಗೆ ಹೇಳಿದುದನ್ನೆಲ್ಲಾ ಆಲಿಸಿದ ವಾಚಕ ಮಹಾಶಯನು ಗೋಪಾಲಕರ ಜೀವನವು ಅತಿ ಸುಖಕರವಾದುದೆಂದು ಊಹಿಸಿರ ಬಹುದು. ಜೀವನದ ಎಲ್ಲಾ ಮಾರ್ಗಗಳಲ್ಲಿಯೂ ಹಳ್ಳ, ದಿಣ್ಣೆ, ಕಲ್ಲು, ಮುಳ್ಳುಗಳಿರುವಂತೆ ಗೋಪಾಲಕರ ಜೀವನದಲ್ಲಿಯೂ ಇರುವುದು. ಇದುವರೆಗೆ ಅವರ ಬಾಳಿನ ಶುಕ್ಲಪಕ್ಷವನ್ನು ನೋಡಿದೆವು. ಇನ್ನು ಕೃಷ್ಣಪಕ್ಷವನ್ನು ಸ್ವಲ್ಪ ನೋಡೋಣ! ಮಾದರಿ ಗೋಪಾಲಕನಾದ ಹಿರಗನ ಜೀವನವನ್ನೇ ತೆಗೆದುಕೊಂಡರೆ ಸಕಲವೂ ವಿಶದವಾಗುವುದು.

ಹಿರಗನ ಜೀವನವು ತುಂಬಾ ಉದ್ವೇಗಪೂರ್ಣವಾದುದು. ಏಕೆಂ ದರೆ ಊರಿನವರ ನಿಂದೆಯು ಅವನಿಗೆ ತಪ್ಪುವುದೇ ಇಲ್ಲ. ತುಂಟ ದನ ಗಳು ಹಿಂಡಿನಿಂದ ತಪ್ಪಿಸಿಕೊಂಡು ಹೋಗಿ ಯಾರ ಗದ್ದೆ ತೋಟಗಳಿ ಗಾದರೂ ನುಗ್ಗಿ ಲೂಟಿಮಾಡುವುವು. ಅಂಥಾ ಪೋಲಿ ಜಾನುವಾರು ಗಳನ್ನು ಕೊಟ್ಟಿಗೆಗೆ ಅಟ್ಟಿಕೊಂಡು ಬರುವುದು, ಭೀಮನು ಪುರುಷಾ ಮೃಗವನ್ನು ತಂದುದಕ್ಕಿಂತಲೂ ಹೆಚ್ಚಾದ ಸಾಹಸಕೃತ್ಯ! ಎಷ್ಟೋ ಸಾರಿ ಅಟ್ಟಿ ಅಟ್ಟಿ ನೊಂದು ಹಿರಗನು ಮಕ್ಕಳಂತೆ ಅತ್ತುಬಿಟ್ಟಿದ್ದಾ ನಂತೆ. ಅದರಲ್ಲಿಯೂ ಮಳೆಗಾಲವಾದರಂತೂ ದನ ಕಾಯುವವರ

ಗೋಳು ಕೇಳುವವರೇ ಇಲ್ಲ. ಹೀಗೆ ತಪ್ಪು ಮಾಡಿದ ದನಗಳಿಗೆ ಗೋಪಾಲಕರ ಕಾನೂನಿನಂತೆ ತಪ್ಪಿಗೆ ತಕ್ಕ ಶಿಕ್ಷೆಯಿರುವುದು. ತುಂಬ ತುಂಟ ದನವಾದರೆ ಅದರ ಕೊರಳಿಗೂ ಮುಂಗಾಲಿಗೂ ಒಟ್ಟು ಒಂದು ಒಂದೂವರೆ ಮೊಳದುದ್ದ ನೇಣನ್ನು ಬಿಗಿದು ಕಟ್ಟುವರು. ಹೀಗೆ ಮಾಡುವುದರಿಂದ ಅದಕ್ಕೆ ಚುರುಕಾಗಿ ಓಡಲು ಆಗುವುದೇ ಇಲ್ಲ. ಕೊರಳನ್ನು ಯಾವಾಗಲೂ ಬಗ್ಗಿಸಿಕೊಂಡೇ ಇರಬೇಕಾಗುವುದು. ಅದಕ್ಕಿಂತಲೂ ಸ್ವಲ್ಪ ಕಡಿಮೆ ತುಂಟು ದನಕ್ಕೆ ಒಂದು ನಾಲ್ಕೈದು ಅಡಿ ಉದ್ದವಾದ ಸುಮಾರು ಒಂಬತ್ತು ಅಂಗುಲ ಅಡ್ಡಳತೆಯುಳ್ಳ ಬಲು ಭಾರವಾದ ಮರದ ಕೊರಡೊಂದನ್ನು ಹುರಿಯ ಮೂಲಕ ಕುತ್ತಿಗೆಗೆ ಕಟ್ಟುವರು. ಕೊರಡಿನ ಒಂದು ತುದಿಯು ಸದಾ ನೆಲದ ಮೇಲೆ ಎಳೆಯುಪಡುವುದು. ಇನ್ನೂ ಸ್ವಲ್ಪ ಸಾಧುವಾದ ದನಕ್ಕೆ ದೊಂಟೆ ಕಟ್ಟುವರು. [ದೊಂಟೆಯೆಂದರೆ ಬಿದಿರಿನ ಗಂಟೆ.] ಆ ದೊಂಟೆ ಯು ಅದು ಹೋದೆಡೆಯೆಲ್ಲಾ ಶಬ್ದಮಾಡುತ್ತಾ ಹೋಗುವುದು. ಆ ಶಬ್ದದ ಸಹಾಯದಿಂದ ಗೋಪಾಲಕರು ದನವನ್ನು ಕಂಡುಹಿಡಿಯು ವರು. ಈ ಶಿಕ್ಷೆಗಳು ಕ್ರೂರವಾದುವುಗಳೆಂದು ತೋರಬಹುದು. ನನಗೂ ಹಾಗೆಯೇ ತೋರಿ ಹಿರಗನಿಗೆ ಹೇಳಿದೆ; ಅವನೂ ಪಶ್ಚಾತ್ತಾ ಪಪಟ್ಟು ಬೇರೆ ದಾರಿ ತೋರಿಸುವಂತೆ ಕೇಳಿದನು. ಬೇರೆ ದಾರಿಯೇ ನನಗೆ ಬಗೆಹರಿಯಲಿಲ್ಲ. ರಾಜಕಾರ್ಯದಲ್ಲಿ ಕೆಲವು ಶಿಕ್ಷೆಗಳು ಕ್ರೂರ ವೆಂದು ತಿಳಿದರೂ, ಬೇರೆ ಉಪಾಯವಿಲ್ಲದೆ ಅವುಗಳನ್ನೆ ಪ್ರಯೋಗಿಸು ವಂತೆ ಹಿರಗನೂ ಸಂಪ್ರದಾಯವನ್ನೇ ಅನುಸರಿಸುವನು.

ಮಲೆನಾಡಿನ ಮಳೆಯು ಜಿರ್ರೆಂದು ಸುರಿಯುವ ದಿನಗಳಲ್ಲಿ ದನ ಕಾಯುವವರ ಗತಿಯು ನಿರ್ಗತಿ! ಅವರು ಕಂಬಳಿ ಕೊಪ್ಪೆ ಹಾಕಿ ಕೊಂಡು ಗುಡ್ಡದಿಂದ ಗುಡ್ಡಕ್ಕೆ ಹೋಗಬೇಕು. ದಿನವೆಲ್ಲಾ ನೀ ನಲ್ಲಿಯೇ ನಡೆಯಬೇಕು. ಕುಳಿತುಕೊಳ್ಳುವುದೂ ಕೂಡ ಕಷ್ಟವೇ! ಅದರ ಮಧ್ಯೆ ಪತ್ತೆಯಿಲ್ಲದೆ ರಕ್ತಹೀರುವ ಜಿಗಣೆಗಳ ಕಾಟ! ಆ ಭೀಕರವಾದ ಅಡವಿಗಳ ಸೊಳ್ಳೆಗಳ ಕಡಿತ! ಪ್ರಚಂಡಮಾರುತನೊ

ಟಿಸುವನು. ಒಂದು ಕಡೆ ಉಕ್ಕಿ ಹರಿಯುವ ತೊರೆಗಳ ಭೋರಾಟ. ಪ್ಪಾಪ! ಇಂಥಾ ಸಮಯದಲ್ಲಿ ಗೋಪಾಲಕರ ಕೊಳಲು ಎಲ್ಲಿ ಅಡಗುವುದೋ ಏನೋ! ಆ ಮಳೆ, ಆ ಚಳಿ, ಆ ಗಾಳಿಯ ಅರ್ಭಟ, ಆ ನೀರಿನ ಭೋರಾಟ ಇವು ಅವರ ಎದೆಯಮೇಲೆ ಭಾರವಾಗಿ ಕುಣಿಯುವುವು. ಅವರಿಗೆ ಬಟ್ಟೆಯಾದರೂ ಇದೆಯೇ? ಮೊಳಕಾಲವರೆಗಿನ ಕೊಳಕಾದ ಪಂಚೆ, ಹರಕು ಅಂಗಿ, ಇವೇ ಗತಿ! ಇದನ್ನೆಲ್ಲಾ ಸಹಿಸಿಕೊಂಡು ಅವರು ತಮ್ಮ ಗುಡಿಸಲುಗಳಿಗೆ ಚಗಟೆ ಗಿಡ ಬಾಗಿಲು ಮುಚ್ಚುವ ಹೊತ್ತಿಗೆ (ಸೂರ್ಯನು ಮುಳುಗಿದಕೂಡಲೆ ಚಗಟೆ ಗಿಡದ ಎಲೆಗಳು ಮುಚ್ಚಿಕೊಳ್ಳುವುವು. ಮಳೆಗಾಲದಲ್ಲಿ ಸೂರ್ಯನನ್ನು ಅಲ್ಲಿ ಕಾಣುವುದೇ ಅಪರೂಪ. ಆದ್ದರಿಂದ ಕೆಲಸಗಾರರು ಹೊತ್ತು ಮುಳುಗುವುದನ್ನು ಚಗಟೆ ಗಿಡದ ಎಲೆಗಳು ಮುಚ್ಚುವುದರಿಂದ ತಿಳಿಯುವರು.) ಸರಿಯಾಗಿ ಬಂದು ಒಲೆಯ ಹತ್ತಿರ ಹೋಗಿ ಚಳಿ ಕಾಯಿಸಿಕೊಳ್ಳುವರು. ಆಗ ಅವರಿಗೆ ಒಲೆಯ ಬೆಂಕಿಯೆಂದರೆ ಸ್ವರ್ಗ ಸದೃಶ! ಇಷ್ಟಾದರೂ ಅವರಿಗೆ ಸುಖವುಂಟೋ? ದಿನ ಬೆಳಗಾಯಿತೆಂದರೆ ಹುಲಿಗಳ ಹಾವಳಿ. ಇಂದೇನು? 'ಕಾಳ' ದನ ಇಲ್ಲ! ಇಂದೇನು? ಗಂಗೇ ಕರು ಇಲ್ಲ! ಹುಡುಕುವವರಾರು? ಗೋಪಾಲಕರೇ. ಸರಿ; ಹುಡುಕಿ ಹುಡುಕಿ ಎಲ್ಲಿಯಾದರೂ ಹುಲಿ ಹಿಡಿದ ಸ್ಥಳವನ್ನು ಕಂಡುಹಿಡಿದು ಉಸ್ಸೆಂದು ಹಿಂತಿರುಗಿ ಬಂದು ಒಡೆಯರಿಗೆ ಹೇಳುವರು. ಸರಿ, ತಿಳಿಸುವುದೇ ತಡ, ಬೈಗುಳದ ಮಳೆಯೇ ಅವರ ಮೈಮೇಲೆ ಸುರಿಯುವುದು. ಅವರಂತೂ ಬೈಸಿಕೊಂಡು ಬೈಸಿಕೊಂಡು ಮೊಂಡರಾಗಿ ಹೋಗಿರುವರು. ಇದೀಗ ಗೋಪಾಲಕರ ಬಾಳಿನ ಕೃಷ್ಣಪಕ್ಷದ ಚಿತ್ರ! ಅವರ ಬಾಳಿನ ಕೃಷ್ಣಪಕ್ಷವು ಶುಕ್ಲಪಕ್ಷಕ್ಕೇನೂ ಕಡಿಮೆಯಾಗುವುದಿಲ್ಲ!

ಇನ್ನೊಂದು ಸತ್ಯಾಂಶವಿದೆ. ಅದನ್ನು ಹೇಳಲಿಷ್ಟವಿಲ್ಲದಿದ್ದರೂ ಹೇಳಬೇಕಾಗಿದೆ. ಊರಿದ್ದಲ್ಲಿ ಹೊಲಗೇರಿ ಎಂಬಂತೆ ಇವರಲ್ಲಿಯೂ ಠಕ್ಕರೂ ಮೋಸಗಾರರೂ ಅಪರೂಪವಾಗಿಯಾದರೂ ಇದ್ದಾರೆ. ಕೆಲವರು ಕಾಲ್ನಡೆಗಳು ಕಳೆದುಹೋದರೆ ತಿಳಿಸುವುದೇ ಇಲ್ಲ. ಒಂದು

ದಿನ ಒಬ್ಬ ದುಷ್ಟನಾದ ದನಗಾಹಿಯ ಸಂಗತಿಯನ್ನು ಕೇಳಿ ತುಂಬಾ ವಿಷಾದಪಟ್ಟೆ. ಅವನು ಕಾಡಿನಲ್ಲಿ ಒಂದೆರಡು ಎಕರೆ ಜಾಗಕ್ಕೆ ಮುಳ್ಳಿನ ಬಲವಾದ ಬಿಡ್ಡನ್ನು ಹಾಕಿ ಒಂದು ಸ್ವಂತ ದೊಡ್ಡಿಯನ್ನು ಮಾಡಿ ಟ್ಟುಕೊಂಡಿದ್ದನಂತೆ. ಕೊಟ್ಟಿಗೆಯಿಂದ ಹಸಿದ ಜಾನುವಾರುಗಳನ್ನು ಅವನು ನೆಟ್ಟಗೆ ಆ ಅರಣ್ಯದ ದೊಡ್ಡಿಗೆ ಅಟ್ಟಿಕೊಂಡುಹೋಗಿ ಅಲ್ಲಿ ಕೂಡಿಹಾಕಿ ತನ್ನ ಕೆಲಸದ ಮೇಲೆ ಹೋಗುತ್ತಿದ್ದು, ಸಾಯಂ ಕಾಲಕ್ಕೆ ಸರಿಯಾಗಿ ಅಲ್ಲಿಂದ ಮನೆಗೆ ಅಟ್ಟಿಕೊಂಡು ಬರುತ್ತಿದ್ದನಂತೆ. ಪಾಪ! ಬಾಯಿಲ್ಲದ ಆ ಪ್ರಾಣಿಗಳು ಹಸಿವೆಯಿಂದ 'ಅಂಬಾ! ಅಂಬಾ' ಎಂದು ಕೂಗಿಕೊಳ್ಳುತ್ತಿದ್ದರೆ ಇವನು ಅವುಗಳನ್ನು ಗದರಿಸಿ ಹೊಡೆ ಯುತ್ತಿದ್ದನಂತೆ. ದನಗಳೆಲ್ಲಾ ದಿನದಿನಕ್ಕೂ ಬತ್ತಿ ಬಡವಾಗುತ್ತಿ ದ್ದುದನ್ನು ನೋಡಿ ಮನೆಯ ಯಜಮಾನನು ಒಂದು ದಿನ ಗೋಪಾ ಲಕನನ್ನು ಗುಟ್ಟಾಗಿ ಹಿಂಬಾಲಿಸಿದನಂತೆ. ಆಗ ಎಲ್ಲಾ ರಹಸ್ಯವೂ ಗೊತ್ತಾಗಿ ದನ ಕಾಯುವವನನ್ನು ಚೆನ್ನಾಗಿ ಹೊಡೆದು ಅಟ್ಟಿದರಂತೆ. ಹೀಗೆಯೇ, ಗೋಪಾಲಕರಲ್ಲಿಯೂ ಕೂಡ ಕ್ರೈಮೂರರು ಸಿಕ್ಕಿಯೇ ಸಿಕ್ಕುವರು.

ಗೋಪಾಲಕರ ಜೀವನವು ಏಕದೇಶೀಯವಾಗಿಲ್ಲ. ಪ್ರಪಂಚದ ಇತರ ಜೀವನಗಳಂತೆ ಅವರ ಜೀವನವೂ ಸುಖದುಃಖಮಿಶ್ರವಾದುದಾ ಗಿದೆ, ಬಹು ಶಾಖೆಯುಳ್ಳದ್ದಾಗಿದೆ. ಅವರೂ ಒಳ್ಳೆಯವರಾಗಿರ ಬಹುದು; ಕೆಟ್ಟವರಾಗಿರಬಹುದು! ಮಹಾತ್ಮರಾಗಿರಬಹುದು; ಹೀನಾ ತ್ಮರಾಗಿರಬಹುದು! ಅವರ ಜೀವನವು ತನ್ನದೇ ಒಂದು ಪ್ರಪಂಚವನ್ನು ಕಲ್ಪಿಸಿಕೊಂಡಿರುವುದು. ಜೀವನದ ಮಹಾ ಮಾರ್ಗಗಳಲ್ಲಿ ಅವರ ಮಾರ್ಗವೂ ಒಂದು! ಜಗತ್ತಿನ ಮಹಾ ಪದವಿಗಳಲ್ಲಿ ಅವರ ಪದವಿ ಯೂ ಒಂದು.

---

# ಜೇನು ಬೇಟೆ

---

ಚೈತ್ರಮಾಸದ ಪ್ರಾತಃಕಾಲದ ವಾಯುಮಂಡಲವು ಸ್ಫಟಿಕದಂತೆ ನಿರ್ಮಲವಾಗಿತ್ತು. ನಮ್ಮ ಮನೆಯ ಮುಂದುಗಡೆ ಕೊಬ್ಬಿ ನಳನಳಿಸಿ ದಟ್ಟವಾಗಿ ಬೆಳೆದ ಕಾಡು ತುಂಬಿದ ಬೆಟ್ಟದ ಸಾಲಿನ ನೆತ್ತಿಯ ಹಿಂದುಗಡೆಯಲ್ಲಿ ಅರುಣರಾಗವು ನಿಮಿಷ ನಿಮಿಷಕ್ಕೂ ಹೊರೆಯೇರುತಿತ್ತು. ಸುತ್ತಮುತ್ತಲೂ ಮರಗಳಿಂದಲೂ ಪೊದೆಗಳಿಂದಲೂ ನೂರಾರು ಪಕ್ಷಿಗಳ ಮಂಗಲ ಮಂಜುಲಗಾನವು ತೇಲಿಬಂದು ಹೃದಯಸಮುದ್ರದಲ್ಲಿ ಹರ್ಷತರಂಗಗಳನ್ನೆಬ್ಬಿಸಿತ್ತು. ನಾನು ನಮ್ಮ ಮನೆಯ ಉಪ್ಪರಿಗೆಯ ಮೇಲೆ ಪೂರ್ವಮುಖವಾಗಿ ಕುಳಿತು ರನ್ನನ ವೀರಕೌರವನ ವಿಚಾರವಾಗಿ ಯೋಚಿಸುತ್ತಿದ್ದೆ. ನೋಡುತ್ತಿದ್ದಹಾಗೆಯೇ ಬಾಲಸೂರ್ಯನ ಕೋಮಲ ಕಿರಣಗಳು ಗಿರಿಶಿಖರದಿಂದ ಹಸುರು ಬನಗಳ ಮೇಲೆ ಓರೆಯಾಗಿ ಕೆಳಗಿಳಿದುಬಂದು ನನ್ನ ಮುಖವನ್ನು ತಮ್ಮ ಹೊಂಬೆಳಕಿನಿಂದ ಮಿಾಯಿಸಿದುವು; ಕಣ್ಣನ್ನು ಸೊಗದ ನೀರಿನಿಂದ ತೋಯಿಸಿದುವು. ಹಸುಳೆಬಿಸಿಲಿನ ಮುದ್ದುಮುತ್ತಿನ ಮಿದು ಬಿಸಿಯು ಆರೋಗ ದೃಢಕಾಯವಾಗಿದ್ದ ನನ್ನ ದೇಹಸಮಸ್ತವನ್ನೂ ನವಚೇತನದ ಮಿಂಚಿನಿಂದ ನಡುಗಿಸಿತು. ನಿರ್ನಿಮಿತ್ತವಾಗಿ ಮುಗುಳು ನಗೆಯೊಂದು ನನ್ನ ಮೊಗದ ಮೇಲೆ ನಲಿದಾಡಿತು. ಜೀವನವೂ ಜಗತ್ತೂ ಸುಖಮುದ್ರಿತವಾದಂತೆ ತೋರಿತು. ಅಡಕೆ ತೋಟದ ನಡುವೆ ಬಾಳೆಯೆಲೆಗಳ ಮೇಲೆ ರಮಣೀಯವಾಗಿ ಕುಣಿಕುಣಿಯುತ್ತಿದ್ದ ಹಸುರುಗಟ್ಟಿದ ಬಿಸಿಲುಕೋಲುಗಳೂ ನನ್ನ ಅನುಭವವನ್ನೇ ಸಮರ್ಥಿಸುವಂತೆ ತೋರುತಿತ್ತು.

ಅಷ್ಟುಹೊತ್ತಿಗೆ ಪುಟ್ಟಣ್ಣ ಬಂದು "ಜೇನುಕೀಳಲು ಹೋಗೋಣ" ಎಂದನು.

ನಾನು ಧ್ಯಾನನಿದ್ರೆಯಿಂದ ತಟಕ್ಕನೆ ಎಚ್ಚತ್ತು ಅವನ ಕಡೆ ನೋಡಿದೆ. ಅವನ ಮುಖವು ನಗುತಿತ್ತು; ಹೊಸ ಸಾಹಸದ ಹುರುಪು

ಕಣ್ಣುಗಳಲ್ಲಿ ಮಿಂಚಿತ್ತು. ನನಗೆ ಹಿಂದಿನ ದಿನ ಸಾಯಂಕಾಲ ನಾವು ಮಾಡಿದ ನಿರ್ಣಯದ ನೆನಪಾಗಿ ಹಿಗ್ಗಿದೆ.

"ಎಷ್ಟು ದೂರ?" ಎಂದೆ.

"ಹೆಚ್ಚು ದೂರ ಇಲ್ಲ; ಇಲ್ಲೇ ಬಹಳ ಸಮೀಪ" ಎಂದನು. ಆಮೇಲೆ ಅವನ 'ಸಮೀಪ'ದ ಅರ್ಥವು ನನಗೆ ಚೆನ್ನಾಗಿ ಅನುಭವಕ್ಕೆ ಬಂತು!

ಅಷ್ಟರಲ್ಲಿಯೇ ನನ್ನ ಮಿತ್ರರಾದ ಹೆಗ್ಗಡೆಯವರೂ ಏಣಿಯ ಮೆಟ್ಟಲುಗಳನ್ನು ಕಿರಿಚಿಕೊಳ್ಳುವಂತೆ ಮಾಡುತ್ತಾ ಮೇಲೆ ಬಂದು, "ಹೋಗೋಣ ಏಳಿ!" ಎಂದರು. ರನ್ನನ ವೀರಕೌರವನನ್ನು ಗದಾ ಯುದ್ಧದಲ್ಲಿಯೇ ಮುಚ್ಚಿಟ್ಟು ಅವಸರದಿಂದ ಮೇಲೆದ್ದೆ. ಬೇಟೆ ಯುಡುಪು ಹಾಕಿಕೊಂಡು ಕೋವಿಗಳನ್ನು ಹೆಗಲಿಗೇರಿಸಿ ಹೆಬ್ಬಾಗಿ ಲಿಂದ ಹೊರಬಿದ್ದೆವು.

ಹೊರಟವರು ನಾವು ಒಟ್ಟು ಐದು ಮಂದಿ. ನಾನು, ಪುಟ್ಟಣ್ಣ, ಹೆಗ್ಗಡೆಯವರು, ಇಬ್ರಾಹಿ, ಹಳೆಪೈಕದ ಪುಟ್ಟ. ಇಬ್ರಾಹಿ ನಮ್ಮ ಮನೆಯಲ್ಲಿ ಕಲ್ಲುಕಟ್ಟಣೆ ಕೆಲಸ ಮಾಡುತ್ತಿದ್ದ ಸಾಬರ ಹುಡುಗ. ಅವೊತ್ತು ಭಾನುವಾರವಾದ್ದರಿಂದ ಅವನ ಹಿರಿಯವರೆಲ್ಲ ಕೊಪ್ಪದ ಸಂತೆಗೆ ಹೋಗಿದ್ದರು. ಇಬ್ರಾಹಿಗೆ ಸ್ವಾತಂತ್ರ್ಯದ ಹಬ್ಬ! ನಾವು ಕಾಡಿಗೆ ಹೊರಡಲು ಅವನೂ ಹೊರಟ. ಅವನ ಕೈಯಲ್ಲಿ ಒಂದು ಕೈಗೊಡಲಿ ಹೊರಸಿದೆವು. ಹಳೆಪೈಕದ ಪುಟ್ಟ ನಮ್ಮ ಒಕ್ಕಲು. ಅವನು ಒಂದು ಜೇನು ಕಂಡಿದ್ದ. ಅದನ್ನು ತೋರಿಸಲೆಂದೇ ಅವನು ನಮ್ಮ ಜೊತೆಗೆ ಬಂದಿದ್ದು. ಅವನ ತಲೆಯ ಮೇಲೆ ಜೇನು ತುಂಬಲು ಬೇಕಾಗಿದ್ದ ಒಂದು ಬೋಗುಣಿ ಹೇರಿದೆವು. ಇನ್ನು ಹೆಗ್ಗಡೆಯವರು ಯಾರೆಂದು ನಿಮಗೆ ಕುತೂಹಲ ಹುಟ್ಟಬಹುದು. ಬಹು ಸಂಕ್ಷೇಪ ವಾಗಿ ಹೇಳುವುದಾದರೆ, ಅವರು ನಮ್ಮ ಮನೆಯಲ್ಲಿ ಕರಣಿಕರಾಗಿ ದ್ದರು. ಇನ್ನು ಪುಟ್ಟಣ್ಣ! ಅವನ ಕತೆ ದೊಡ್ಡದು. ಇನ್ನಾವಾಗ ಲಾದರೂ ಸಮಯಬಿದ್ದಾಗ ಪ್ರಸ್ತಾಪಿಸುವೆನು. ಆದರೆ ಈಗಿನ ಸಂದ ರ್ಭಕ್ಕೆ ಅಗತ್ಯವಾಗಿ ಬೇಕಾಗಿರುವ ಒಂದೇ ಒಂದು ಮಾತು ಹೇಳು ತ್ತೇನೆ. ಅವನೊಬ್ಬ ಕೆಚ್ಚೆದೆಯ ಕಡುಗಲಿ ಬೇಟೆಗಾರ!

ನಾವೆಲ್ಲರೂ ಹೆಬ್ಬಾಗಿಲು ದಾಟಿ ಹೊರ ಅಂಗಳಕ್ಕೆ ಹೋಗಲು, ಪುಟ್ಟಣ್ಣ ಸಿಳ್ಳುಹಾಕಿ ನಾಯಿಗಳನ್ನು ಕರೆದನು. ಎಲ್ಲವೂ ಓಡಿಬಂದು ಕಾಡಿಗೆ ಹೋಗುವ ಸಂತೋಷದಿಂದ ನಮ್ಮ ಮೈಮೇಲೆ ಹಾರಿ ನೆಗೆದು ಕುಣಿದು ಬಾಲವಳ್ಳಾಡಿಸಿ ಬೊಗಳುತ್ತ ಗಲಾಟೆ ಎಬ್ಬಿಸಿದುವು. ಡೈಮಂಡನನ್ನು ಮಾತ್ರ ಪುಟ್ಟಣ್ಣ ಹೆದರಿಸಿ ಹಿಂದಕ್ಕೆ ಅಟ್ಟಿದನು. ಏಕೆಂದರೆ, ಹಿಂದಿನ ದಿನದ ಬೇಟೆಯಲ್ಲಿ ಅದನ್ನು ಕಾಡುಹಂದಿಯೊಂದು ಕೋರೆಯಿಂದ ತಿವಿದು ಪೂರಾ ಗಾಯ ಮಾಡಿತ್ತು. ಆ ನಾಯಿಯಂತೂ ಹಿಂದಕ್ಕುಳಿದು ಖಿನ್ನಮುಖದಿಂದ ನಾವು ಹೋಗುವುದನ್ನೇ ನಿರ್ನಿಮೇಷವಾಗಿ ನೋಡುತ್ತಿತ್ತು.

ನಮ್ಮ ಗದ್ದೆ, ಹಡಗಿನ ಮಕ್ಕಿಯ ಗಡಬಡೆ ಹಳ್ಳ, ಅಲ್ಲಿಂದ ಮೇಲೆ ಕಲ್ಲುಕೊಡಿಗೆಯ ಬಳಿಯ ಸರ್ಕಾರಿ ರಸ್ತೆ, ಎಲ್ಲವನ್ನೂ ಬೇಗ ಬೇಗನೆ ಹಿಂದೆ ಬಿಟ್ಟು ಕಾಡು ಹತ್ತಿದೆವು. ದಾರಿಯಲ್ಲಿ ಹರಟೆಗಳಿಗೇನೂ ಬಡತನವಿರಲಿಲ್ಲ. ಪುಟ್ಟಣ್ಣನು ಹಿಂದಿನ ದಿನದ ಬೇಟೆಯಲ್ಲಿ ಸದಿಸೆಟ್ಟಿಯು ಬಹು ಸುಲಭದಲ್ಲಿ ಹಂದಿಯೊಂದನ್ನು ಹೊಡೆಯದೆ ಬಿಟ್ಟ ವಿಚಾರವನ್ನು ವರ್ಣಿಸಿ ವರ್ಣಿಸಿ ವಿಷಾದಪಟ್ಟನು. ಹಳೆಪೈಕದ ಪುಟ್ಟನು ಬಸ್ಲಹರೆ ಕಾನಿಗೆ ಮಿಗಹಂದಿಗಳು ಬಂದ ಸುದ್ದಿ ತೆಗೆದು ಅರ್ಧಗಂಟೆ ಉಪನ್ಯಾಸ ಮಾಡಿದನು. ಮಧ್ಯೆ ಮಧ್ಯ ದಾರಿಯಲ್ಲಿ (ದಾರಿ ಎಂದರೆ ದಾರಿಯಲ್ಲ; ನಾವು ಹೋಗುತ್ತಿದ್ದುದೇ ದಾರಿ!) ಪುಟ್ಟಣ್ಣನು ಅಲ್ಲಲ್ಲಿ ನಿಂತು ಅರಣ್ಯದ ಸುಪ್ರಸಿದ್ಧ ಐತಿಹಾಸಿಕ ಸ್ಥಳಗಳನ್ನು ತೋರಿಸಿದನು. ಒಂದೆಡೆ ಜಟ್ಟಿನಮಕ್ಕಿ ಸುಬ್ಬಯ್ಯಗೌಡರು ಹುಲಿ ಬಿಟ್ಟ ಸ್ಥಳವೆಂದು ತೋರಿದನು. ಅವರು ಕೂತಿದ್ದ ಮರದ ಹರೆಯನ್ನೂ ಹುಲಿ ಬಂದ ಮಾರ್ಗವನ್ನೂ ಹುಲಿ ಕುಳಿತ ಜಾಗವನ್ನೂ ಎಲ್ಲಾ ತೋರಿಸಿ, ಅವುಗಳ ಮೇಲೆ ವ್ಯಾಖ್ಯಾನ ಟೀಕೆಗಳನ್ನು ಮಾಡಿಬಿಟ್ಟನು. ಮತ್ತೊಂದೆಡೆ ತಾನೇ ಒಂದು ದೊಡ್ಡ ಹಂದಿ ಹೊಡೆದ ಸ್ಥಳವೆಂದು ತೋರಿದನು. ಅವನು ಕೂತಿದ್ದ ಮರದ ಬುಡವನ್ನೂ ಹಂದಿಯು ಅರಣ್ಯದಲ್ಲಿ ಬಂದ ದಿಕ್ಕನ್ನೂ ಗುರುತು ಹಚ್ಚಿ ತೋರಿದ ಮೇಲೆ, ತಾನು ಮೊದಲನೆಯ ಗುಂಡುಹಾರಿಸಿದ ಜಾಗವನ್ನೂ ಎರಡ

ನೆಯು ಈಡು ಹೊಡೆದ ಸ್ಥಳವನ್ನೂ ತೋರಿಸಿದನು. ಹೀಗೆ ಹರಟೆ ಹೊಡೆಯುತ್ತ, ನೇರಿಲಹಣ್ಣು, ಮಾವಿನಹಣ್ಣು, ಕಲ್ಲುಸಂಪಿಗೆಹಣ್ಣು ಮೊದಲಾದವುಗಳನ್ನು ಮನಸ್ಸು ಬಂದಂತೆ ತಿನ್ನುತ್ತ ಮುಂದೆಮುಂದೆ ಜವದಿಂದ ಸಾಗಿದೆವು. ನಾಯಿಗಳಂತೂ ಅವಿಶ್ರಾಂತ ಸಾಹಸದಿಂದ ಕಾಡನ್ನೆಲ್ಲ ಹುಡುಕುತ್ತ ಬರುತ್ತಿದ್ದುವು.

ಸಹ್ಯಾದ್ರಿಗಳ ಚೈತ್ರಮಾಸದ ಅರಣ್ಯವು ನಮ್ಮೆಲ್ಲರ ಹೃದಯ ಗಳಲ್ಲಿಯೂ ಶಾಂತಿಸಂತೋಷಗಳ ಚಿಲುಮೆ ಚಿಮ್ಮುವಂತೆ ಮಾಡಿತ್ತು. ನಾನು ತಿಳಿದು ಆನಂದಪಡುತ್ತಿದ್ದೆ; ನನ್ನ ಜೊತೆಯವರು ತಿಳಿಯದೆ ಆನಂದಪಡುತ್ತಿದ್ದರು. ಎತ್ತನೋಡಿದರೂ ಕಣ್ಣಿಗೆ ತಣ್ಣಗಿದ್ದ ಹಸು ರಿನ ಸಾಗರವು ಮೇಲೇರುತಿದ್ದ ಸೂರ್ಯನ ಉರಿಜೇವವನ್ನು ಆರಿಸಿ ಬಿಟ್ಟಿತ್ತು. ಸಾಂದ್ರ ತರುಸಮೂಹದ ಮಧ್ಯೆ ಮೆಲ್ಲಗೆ ಬೀಸುತ್ತಿದ್ದ ತಂಗಾಳಿಯು ಬಿಜ್ಜಣವಿಕ್ಕುತಿತ್ತು. ನಾನು ಮೆಲ್ಲಮೆಲ್ಲನೆ ಹಾಡಲಾ ರಂಭಿಸಿದೆ. ಆ ವನದ ನೀರವತೆಯಲ್ಲಿ ತುಂಬಿ ತುಳುಕುವಂತೆ ಹೊರ ಹೊಮ್ಮುತಿದ್ದ ನನ್ನ ದನಿಗೆ ನಾನೇ ಮಾರುಹೋದೆ. ಜೊತೆಯ ವರೂ ಮಾತನ್ನೆಲ್ಲ ನಿಲ್ಲಿಸಿ ಆಲಿಸುತ್ತ ಬರುತ್ತಿದ್ದರು. ಹಠಾತ್ತಾಗಿ ನಾಯಿಗಳು ಕೂಗಿದುವು! ಪುಟ್ಟಣ್ಣ ಬಲಕ್ಕೆ ಓಡಿದನು. ಹೆಗ್ಗಡೆ ಯವರು ಎಡಗಡೆಗೆ ನುಗ್ಗಿದರು. ನಾನೂ ಕೋವಿಯನ್ನು ತಟಕ್ಕನೆ ಸಿದ್ಧಮಾಡಿಕೊಂಡು ನಡುವೆ ನುಗ್ಗಿದೆ. ಪುಟ್ಟಣ್ಣ, ಹೆಗ್ಗಡೆ ಇಬ್ಬರೂ ಕಣ್ಮರೆಯಾದರು. ಇಬ್ರಾಹಿ, ಹಳೆಪೈಕದ ಪುಟ್ಟ ಹಿಂದೆಯೇ ನಿಂತು ಬಿಟ್ಟಿದ್ದರು. ಅಷ್ಟರಲ್ಲಿ ಪುಟ್ಟಣ್ಣ "ಢಂ! ಢಂ" ಎಂದು ಎರಡು ಗುಂಡು ಹಾರಿಸಿ "ಹಂದಿ! ಹಂದಿ!" ಎಂದು ಕೂಗಿದನು. ನನ್ನ ಎದೆಯಲ್ಲಿ ನೆತ್ತರು ಬೇಗಬೇಗ ನುಗ್ಗಹತ್ತಿತು. ನೋಡುತ್ತಿದ್ದ ಹಾಗೆಯೇ ಹಂದಿಯೊಂದು ಹೂಂಕರಿಸುತ್ತ ನನ್ನೆದುರು ನುಗ್ಗಿತು, ಅತಿ ವೇಗದಿಂದ! ಮರದ ಮರೆಯಲ್ಲಿ ನಿಂತು ಒಂದು ಗುಂಡು ಹಾರಿ ಸಿದೆ. ಮತ್ತೊಂದು ಗುಂಡು ಹೊಡೆಯಲೆಂದು ಕೋವಿಯ ಕುದುರೆ ಯನ್ನು ಎತ್ತಿ ಬಿಲ್ಲು ಎಳೆದೆ. ಆದರೆ ಎಡಗಡೆ ನಳಿಗೆಗೆ ಹಾಕಿದ್ದ ತೋಟದ ಕೇಪು ಕೆಟ್ಟಿತ್ತು. ಗುಂಡು ಹಾರಲೆ ಇಲ್ಲ, ಹಂದಿ ಪಲಾ

ಯನ ಮಾಡಿತು. ನಾಯಿಗಳು ಅದರ ಹಿಂದೆ ಬೊಗಳುತ್ತ ಓಡಿದುವು. . . . . . . . . .

ಹೆಗ್ಗಡೆಯವರು, ಪುಟ್ಟ, ಇಬ್ರಾಹಿ ಎಲ್ಲರೂ ನಮ್ಮಿಬ್ಬರನ್ನೂ ಒಳ್ಳೆಯ ಗುರಿಗಾರರೆಂದು ಹಾಸ್ಯಮಾಡಿದರು.

ಪುಟ್ಟನು ಕಂಡ ಜೇನನ್ನು ಸಮೀಪಿಸಿದೆವು. ಅವನು ಮಾತ್ರ ನಿರಾಶೆಯಿಂದ "ಓಹೋ, ಜೇನು ಗರಕುಬಿದ್ದು ಬಿಟ್ಟುಹೋಗಿದೆ!" ಎಂದನು. ಹಿಂದಿನ ದಿನದ ಕಾಳ್ಕಿಚ್ಚು ಮರದ ಬುಡದ ಹುತ್ತದಲ್ಲಿದ್ದ ತುಡುವೆ ಜೇನಿಗೆ ಹೊಗೆ ಹಾಕಿ ಓಡಿಸಿಬಿಟ್ಟಿತ್ತು.

ನಿರಾಶೆಯಿಂದ ಹಿಂತಿರುಗಿ ಪುಟ್ಟಣ್ಣನು ಕಂಡ ಜೇನಿಗಾಗಿ ಹೊರಟೆವು. ಇನ್ನೊಂದು ಕಾಲುಗಂಟೆಯಲ್ಲಿಯೇ ಅಲ್ಲಿಗೆ ಹೋಗಿ ಸೇರಿದೆವು. ಅಲ್ಲಿ ಕಾಡು ಬೆಂಕಿ ಬಿದ್ದಿರಲಿಲ್ಲ! ಜೇನೂ ಇತ್ತು! ಜೇನು ಹುಳುಗಳು ಒಂದೊಂದಾಗಿ ಹುತ್ತದೊಳಗೆ ಹೋಗಿಬರುತ್ತಿದ್ದುದನ್ನು ಕಂಡು ನಾನಂತೂ ಹಿಗ್ಗಿದೆನು. ಇಬ್ರಾಹಿಯೂ ಆನಂದಾತಿಶಯದಿಂದ ಹಲ್ಲುತೆರೆದು ಬಾಯಿ ಅರಳಿಸಿದ್ದನು.

ಪುಟ್ಟಣ್ಣನು ಹುಳುಗಳನ್ನು ಪರೀಕ್ಷಿಸಿ ನೋಡಿ "ಕರಿತುಡುವೆಯಪ್ಪಾ! ಕೀಳಲು ಬಹುಕಷ್ಟ! ನನ್ನಿಂದಾಗದು!" ಎಂದನು.

ಜೇನಿನಲ್ಲಿ ಹೆಜ್ಜೇನು, ತುಡುವೆ, ಕೋಲುಜೇನು, ನಸರಿ ಎಂಬ ಪ್ರಭೇದಗಳುಂಟು. ತುಡುವೆಯಲ್ಲಿ ಕರಿ, ಬಿಳಿ ಎಂಬ ಎರಡು ಜಾತಿ. ಇವುಗಳ ತುಪ್ಪವೆಲ್ಲ ತಿನ್ನಲು ಮಧುರವಾದರೂ ಅವುಗಳ ಕಡಿತ, ಕಾಟ, ರುಚಿ, ಗುಣ ಇವುಗಳಲ್ಲಿ ವ್ಯತ್ಯಾಸವಿದೆ. ಹೆಜ್ಜೇನನ್ನು ಪ್ರಾಯಶಃ ಎಲ್ಲರೂ ನೋಡಿದ್ದಾರೆ. ಪಟ್ಟಣಗಳಲ್ಲಿ ದೊಡ್ಡ ದೊಡ್ಡ ಸೌಧಗಳಲ್ಲಿ ಕರ್‍ರಗೆ ನೇತಾಡುವುವು! ಮಲೆನಾಡಿನಲ್ಲಿ ದೊಡ್ಡ ದೊಡ್ಡ ಮರಗಳ ಶಾಖೆಗಳಿಂದ ಹಲ್ಲೆಗಳು ನೇತುಬೀಳುತ್ತವೆ. ಅದನ್ನು ಕೀಳಬೇಕಾದರೆ ಅಥವಾ ಕೊಯ್ಯಬೇಕಾದರೆ ಅದು ಕಟ್ಟಿರುವ ಕೊಂಬೆಗೆ ನೇರವಾಗಿ ಕೆಳಭಾಗದಲ್ಲಿ ನೆಲದ ಮೇಲೆ ಬೆಂಕಿ ಹಾಕಿ, ಬೆಂಕಿಗೆ ಹಸುರೆಲೆಗಳನ್ನು ಒಟ್ಟಿ ಹೊಗೆ ಮಾಡುತ್ತಾರೆ. ಆ ಧೂಮಪಾನವನ್ನು ಸಹಿಸಲಾರದ ಮಧುಪಗಳು ಹಲ್ಲೆಯನ್ನು ಬಿಟ್ಟು ದೂರಹೋಗುತ್ತವೆ.

ಆಗ ಮರವನ್ನು ಹತ್ತಿ, ಹಗ್ಗ ಕಟ್ಟಿದ ಬೋಗುಣಿಗೆ ಅದನ್ನು ಕೊಯ್ದು
ಹಾಕಿ ಮೆಲ್ಲಗೆ ಇಳಿಸುತ್ತಾರೆ. ಒಂದು ಜೇನಿಗೆ ಒಂದೇ ಹಲ್ಲೆ ಇರು
ತ್ತದೆ. ಆದರೆ ಬಹಳ ದೊಡ್ಡದು. ಹೆಜ್ಜೇನು ಹುಳು ಕಡಿದರೆ ತುಂಬಾ
ಯಾತನೆ. ಎಷ್ಟೋ ಜನರೂ ಪ್ರಾಣಿಗಳೂ ಅವುಗಳ ಕೈಗೆ ಸಿಕ್ಕಿ
ಪ್ರಾಣಬಿಟ್ಟಿದ್ದಾರೆ. ಆದ್ದರಿಂದಲೇ ಹೆಜ್ಜೇನನ್ನು ಸಾಧಾರಣವಾಗಿ
ಹಗಲು ಕೀಳುವುದಿಲ್ಲ.

ತುಡುವೆ, ಕೋಲುಜೇನು ಇವುಗಳನ್ನು ನೋಡಲು ಬಹು
ಜನರಿಗೆ ಅವಕಾಶವಿಲ್ಲ. ಕೋಲು ಜೇನು ಬಹಳ ಸಾಧುವಾದುದು
ಇದರ ಗೂಡು ದೊಡ್ಡದು ಎಂದರೆ ಚೆನ್ನಾಗಿ ಬೆಳೆದ ಚಕ್ಕೋತ
ಕಾಯಿಯಷ್ಟು ದಪ್ಪವಿರುತ್ತದೆ. ಇದರಲ್ಲಿಯೂ ಒಂದು ಜೇನಿಗೆ ಒಂದೇ
ಹಲ್ಲೆ. ಹಲ್ಲೆಯು ಪೊದೆಗಳಲ್ಲಿ ಸಣ್ಣ ಕೋಲುಗಳಿಂದ ನೇತುಬಿದ್ದಿರು
ತ್ತದೆ. ನನಗಿನ್ನೂ ನೆನಪಿದೆ. ನಾವು ತೀರ್ಥಹಳ್ಳಿಯಲ್ಲಿ ಓದುತ್ತಿ
ದ್ದಾಗ ಒಂದು ದಿನ ಕುಶಾವತಿ ನದಿಗೆ ಈಜಲು ಹೋಗಿದ್ದೆವು. ಅದ
ತೀರದಲ್ಲಿ ಒಂದು ನೆಕ್ಕೆ ಹೊದೆಯಲ್ಲಿ ಬಡಪಾಯಿ ಕೋಲುಜೇನು
ಕಟ್ಟಿತ್ತು. ಆಗ ನಮಗೆ ಅದು ಸಾಧುವಾದ ಜೇನೆಂಬುದು ಗೊತ್ತಿ
ಲ್ಲಿಲ್ಲ. ಹುಳುಗಳನ್ನು ಓಡಿಸಲು ದೊಡ್ಡ ಬೆಂಕಿ ಹಾಕಿದೆವು. ಒಂದ
ಹುಳುವೂ ಹಾರಿಹೋಗಲಿಲ್ಲ! ನಮ್ಮ ಮನಸ್ಸಿಗೆ ಅದು ಬಹಳ ಹ
ಮಾರಿ ಜೇನೆಂದು ತೋರಿ ಮತ್ತೂ ದೊಡ್ಡದಾಗಿ ಬೆಂಕಿ ಮಾಡಿದೆವು
ಆದರೂ ಒಂದು ಹುಳುವೂ ಹಾರಲಿಲ್ಲ! ನಮಗೆಲ್ಲಾ ಆಶ್ಚರ್ಯವಾಗಿ
ಬೆಂಕಿ ಆರಿಸಿ ನೋಡಿದಾಗ ಹುಳುಗಳೂ ಇರಲಿಲ್ಲ, ಹಲ್ಲೆಯೂ ಇ
ಲ್ಲಿಲ್ಲ! ಜೇನು ಕಟ್ಟಿದ್ದ ಗುರುತೇ ಇರಲಿಲ್ಲ! ನಿಜಾಂಶವೇನೆಂದರೆ
ಬೆಂಕಿಯ ಜ್ವಾಲೆಯು ಮಿತಿಮೀರಿ ಹುಳುಗಳೆಲ್ಲವೂ ಹಾರುವ ಮೊದ
ಸತ್ತು ಉರಿದು ಬೂದಿಯಾಗಿ ಹೋಗಿದ್ದುವು! ಹಲ್ಲೆಯೂ ಕರ
ಹೋಗಿತ್ತು! ಅಂತೂ ನಮ್ಮ ಅತ್ಯಾಶೆಗೆ ಸರಿಯಾದ ಪರಿಣಾಮವಾ
ಯಿತು.

ಪಾಠಕನು ಕಾಡುನಾಡಿನ ಹಳ್ಳಿಯವನಾಗಿದ್ದರೆ ಆತನಿಗೆ ನ
ರಿಯ ಪರಿಚಯ ಚೆನ್ನಾಗಿರುತ್ತದೆ. ಪುರದ ಪಾಠಕನೇ, ನೀನು ಎಂದಾ

ದರೂ ಮಿಠಾಯಿ ಅಂಗಡಿಗಳಿಗೆ ಹೋಗಿದ್ದೀಯಾ? ಈ ಪ್ರಶ್ನೆಯೇ ಅನಾವಶ್ಯಕ! ಕಾಫಿ ಹೋಟಲು, ಮಿಠಾಯಿ ಅಂಗಡಿಗಳಿಗೆ ಹೋಗದಿದ್ದ ಪಟ್ಟಣಿಗನುಂಟೇ? ಒಂದು ವೇಳೆ ಇದ್ದರೆ, ಅವನನ್ನು ಪಟ್ಟಣಿಗ ನಾಗರಿಕ ಎಂದು ಕರೆಯುವುದು ಉಪಚಾರಕ್ಕೆಂದೇ ಹೇಳಬೇಕು.

ಮಿಠಾಯಿ ರಾಶಿಗೆ ಸಾವಿರಾರು ಸಣ್ಣ ಹುಳುಗಳು ಬಂದು ಮುತ್ತಿರುತ್ತವೆ. ನಿನಗೆ ನೊಣಗಳ ಗುರುತು ಚೆನ್ನಾಗಿದೆಯಷ್ಟೆ! ಅವುಗಳನ್ನು ಬಿಟ್ಟರೆ ಅಲ್ಲಿರುವ ಮತ್ತೊಂದು ಬಗೆಯ ಹುಳುಗಳೇ ನಸರಿ ಹುಳುಗಳು. ಅವು ಕಚ್ಚುವುದಿಲ್ಲ, ಕಡಿಯುವುದಿಲ್ಲ. ತುಂಬಾ ಕೀಟಲೆ ಕೊಡುತ್ತವೆ. ಕಿವಿಗೆ ನುಗ್ಗುತ್ತವೆ. ತಲೆಕೂದಲ ತುಂಬಾ ಮುಂಗಮುಷ್ಟಿ ಹಿಡಿದು ಕಚ್ಚಿಕೊಳ್ಳುತ್ತವೆ. ಇದನ್ನು ಕೇಳಿ ನಸರಿ ತುಪ್ಪ ಸುಲಭಸಾಧ್ಯವೆಂದು ತಿಳಿಯಬಾರದು. ಅದು ಗೂಡು ಮಾಡುವುದು ಮರದ ಪೊಟರೆ, ಮನೆಯ ಗೋಡೆಯ ಟೊಳ್ಳಿರುವ ಬಿರುಕು, ಬೊಂಬು ಇಂತಹ ಜಾಗಗಳಲ್ಲಿ. ಅದರ ಮರಿಗಳನ್ನು ತಂದಿಟ್ಟು ಕೊಡಗಳಲ್ಲಿಯೂ ತುಪ್ಪ ಮಾಡಿಸಬಹುದು. ಇದರ ತುಪ್ಪ ಬಹಳ ರುಚಿ. ಹೆಚ್ಚಾಗಿ ತಿನ್ನಲೂಬಹುದು. ಔಷಧಿಗಳಿಗೂ ಉಪಯೋಗಿಸುವರು.

ಒಂದುಸಾರಿ ನಸರಿ, ಶ್ರೀಕಂಠ ಇವರಿಬ್ಬರ ದೆಸೆಯಿಂದ ನನಗೆ ಸ್ಕೂಲು ಬಿಡುವ ಕಾಲ ಒಂದಿತ್ತು. ಪರೀಕ್ಷೆ ಸಮೀಪಿಸಿದ ಸಮಯ. ಸ್ಕೂಲಿನ ಬೋಳು ಮಹಡಿಯ ಮೇಲೆ ಹತ್ತಿ ಹೆಡ್ಮಾಸ್ಟರ ಆಫೀಸಿನ ಮೇಲುಗಡೆಯೇ ಓದುತ್ತಿದ್ದೆವು. ಗೋಡೆಯೊಳಗೆ ಒಂದು ನಸರಿ ಗೂಡು ಇತ್ತು. ಮೂರು ದಿನದ ತನಕ ಶ್ರೀಕಂಠ ನಸರಿ ಹುಳುಗಳನ್ನು ನೊಣಗಳೆಂದೇ ತಿಳಿದಿದ್ದನು. ಗ್ರಹಚಾರ ಹಿಡಿದ ನಾನು ಒಂದು ದಿನ ನಿಜಸ್ಥಿತಿ ತಿಳಿಸಿದೆ. ಶ್ರೀಕಂಠ ನಸರಿ ಕೀಳೋ ಎಂದು ಹಠ ಹಿಡಿದ. ನಾನೆಷ್ಟೋ ಹೇಳಿದೆ, "ಹೆಡ್ಮಾಸ್ಟರ ಆಫೀಸಿದೆಯಪ್ಪಾ ಕೆಳಗೆ, ಬೇಡ; ಪರೀಕ್ಷೆಯ ಸಮಯ, ಸರ್ಕಾರೀ ಕಟ್ಟಡ! ಕಿತ್ತರೆ ನಮ್ಮ ಮಾನ ಉಳಿಯುವುದಿಲ್ಲ" ಎಂದು. ಮರುದಿನ ಅವನೊಬ್ಬನೇ ಬಂದು ಕಿತ್ತೇ ಬಿಟ್ಟ! ಕಿತ್ತೂ ಕಿತ್ತ; ಆಮೇಲೆ ಜುಲ್ಮಾನೆಯನ್ನೂ

ಕೊಟ್ಟ! ಅವನ ದೆಸೆಯಿಂದ ಹೆಡ್ಮಾಸ್ಟರು ನನಗೂ 'ಸ್ವಲ್ಪ' ಬೈದರು! ಅದುವರೆಗೂ ಅವರ ಮುಂದೆ ಮೆಹನತ್ತಿನಿಂದ ಇರುತ್ತಿದ್ದ ನನಗೆ ಅವರ ಬೈಗಳೇ ಜುಲ್ಮಾನೆಗಿಂತ ಹೆಚ್ಚಾಯಿತು. ಶ್ರೀಕಂಠನನ್ನು ಕೇಡಿ ರಿಜಿಸ್ಟರಿಗೂ ದಾಖಲೆ ಮಾಡಿದರೆಂದು ತೋರುತ್ತದೆ. ನನಗೆ ಸರಿಯಾಗಿ ನೆನಪಿಲ್ಲ. ಈ ಸಂಗತಿ ಆಗ ನಮ್ಮ ಇಸ್ಕೂಲಿನಲ್ಲೆಲ್ಲ "ನಸರಿ ಕೇಸು" ಎಂದು ಪ್ರಸಿದ್ಧವಾಗಿತ್ತು!

ಬಿಳಿ ತುಡುವೆ ಕರಿ ತುಡುವೆಗಿಂತ ಸ್ವಲ್ಪ ಸಾಧು. ಮರಗಳಲ್ಲಿ ಸಣ್ಣ ತೂತು ಇರುವ ಪೊಟರೆ, ಗೆದ್ದಲಿಲ್ಲದ ಹುತ್ತ ಇಂಥಾ ಅಂತ ರಂಗದ ಸ್ಥಳಗಳಲ್ಲಿಯೇ ತುಡುವೆ ಜೇನು ಗೂಡು ಮಾಡುವುದು. ಕೋಲು ಜೇನು ಹೆಜ್ಜೇನು ಇವುಗಳಂತೆ ಇದು ಎಂದಿಗೂ ಬಹಿರಂಗ ವಾಗಿರುವುದೇ ಇಲ್ಲ. ಇದರಲ್ಲಿ ಒಂದೊಂದು ಜೇನಿಗೆ ಆರು ಏಳು ಹಲ್ಲೆಗಳ ತನಕ ಇರುತ್ತವೆ. ಇದರ ಹಲ್ಲೆಗಳನ್ನು ಹೆಜ್ಜೇನು ಹಲ್ಲೆ ಗಳಿಗೆ ಹೋಲಿಸಿದರೆ ಬಹು ಸಣ್ಣ. ಈ ಜಾತಿ ಜೇನುಹುಳು ಹೆಜ್ಜೇನು ಹುಳುವಿಗಿಂತ ಚಿಕ್ಕದು. ಕೋಲು ಜೇನು ಹುಳುವಿಗಿಂತ ದೊಡ್ಡದು. ಸಾಕು; ನಾನೇನು ಪ್ರಾಣಿಶಾಸ್ತ್ರಜ್ಞನಲ್ಲ. ಪ್ರಬಂಧಕಾರನಿಗೆ ಶಾಸ್ತ್ರ ಕಾರನ ಹಕ್ಕೂ ಇಲ್ಲ. ಅದೂ ಅಲ್ಲದೆ ನೀವೆಲ್ಲ ಆಕಳಿಸುತ್ತಿದ್ದೀರಿ!

ನಮ್ಮ ಬಂದೂಕಗಳನ್ನೆಲ್ಲ ಒಂದು ದೊಡ್ಡ ಮರದ ಬುಡಕ್ಕೆ ಒರಗಿಸಿದೆವು. ನಾನು ಪುಟ್ಟಣ್ಣ ಇಬ್ಬರೂ ಜೇನು ಕಟ್ಟಿದ್ದ ಹುತ್ತ ದಿಂದ ದೂರ ಹೋಗಿ ಕುಳಿತೆವು! ನಮ್ಮಿಬ್ಬರಿಗೂ ಜೇನು ಹುಳು ಗಳೆಂದರೆ ಸ್ವಲ್ಪ ಎದೆಯುಲ್ಲಿ ಹಾಗೆ ಹಾಗೆ! ಹಳೆಪೈಕದ ಪುಟ್ಟನು ಕಾಡು ಮೆಣಸಿನ ಎಲೆಗಳನ್ನು ಚೆನ್ನಾಗಿ ಅಗಿದು, ಅದರ ರಸವನ್ನು ಹುತ್ತದ ತೂತಿಗೆ ಉಗಿದು, ಆ ತೂತಿನೊಳಕ್ಕೆ ಬುಸ್ ಬುಸ್ ಎಂದು ಉಸಿರೂದತೊಡಗಿದನು. ತುಡುವೆ ಜೇನು ಕೀಳಲು ಇದೊಂದು ಉಪಾಯ. ಮೆಣಸಿನ ಎಲೆ, ಬೆಳ್ಳುಳ್ಳಿ ಮುಂತಾದ "ಘಾಟು" ಇರುವ ಪದಾರ್ಥಗಳನ್ನು ಅಗಿದು ತೂತಿನೊಳಕ್ಕೆ ಉಗಿದು ಗಾಳಿ ಊದುತ್ತಾರೆ. ಜೇನು ಹುಳುಗಳಿಗೆ ತಲೆತಿರುಗಿ (ಒಂದೊಂದು ಸಾರಿ ಉಸಿರೂದುವವನಿಗೂ ಹಾಗಾಗುವುದುಂಟು!) ಹಲ್ಲೆಗಳನ್ನೆಲ್ಲ ಬಿಟ್ಟು

ದೂರ ಸರಿಯುತ್ತವೆ. ಆಗ ತೂತನ್ನು ಅಗಲವಮಾಡಿ ಹಲ್ಲೆಗಳನ್ನು ತೆಗೆಯುತ್ತಾರೆ.

ಪುಟ್ಟನ ಉಪಾಯಕ್ಕೆ ಕರಿತುಡುವೆ ಬಗ್ಗಲಿಲ್ಲ. ನಾಲ್ಕೈದು ಹುಳುಗಳೂ ಅವನಿಗೆ ಹೊಡೆದುವು. ಕಾಲಿಗೆ ಬುದ್ಧಿ ಹೇಳಿದನು. ಆಗ ಜೇನು ಕೀಳುವುದರಲ್ಲಿ ಪ್ರವೀಣರಾದ ಹೆಗ್ಗಡೆಯವರು ತಮ್ಮ ಜೇಬಿನಲ್ಲಿದ್ದ ಬೆಳ್ಳುಳ್ಳಿಯನ್ನು ತೆಗೆದು, ಚೆನ್ನಾಗಿ ಅಗಿದು, ಮುಂದಿನ ಕ್ರಮ ಜರುಗಿಸಿದರು. ಆದರೂ ಹುಳುಗಳು ಮತ್ತೂ ರೋಷದಿಂದ ನುಗ್ಗಿಬಂದು ಮೂಗು ಕಣ್ಣು ತುಟಿ ಕೆನ್ನೆ ಎಲ್ಲ ಕಡೆಗೂ ಹೊಡೆಯುಲಾರಂಭಿಸಿದುವು! ಪಾಪ! ವೀರರಾದರೂ ಎಷ್ಟೆಂದು ತಾಳಿಯಾರು? ನಾವಿಬ್ಬರೂ ಕುಳಿತ ಕಡೆಗೆ ಓಡಿಬಂದರು. ಹುಳುಗಳೂ ಅವರನ್ನು ಹಿಂಬಾಲಿಸಿದುವು. ಪುಟ್ಟಣ್ಣ ಅಬ್ಬರಿಸಿ ಕೂಗಿ ಓಡಿದನು. (ಸ್ವಲ್ಪ ಹಾಸ್ಯಕ್ಕಾಗಿಯೇ ಇರಬಹುದು!) ನಾನೂ ಅವನ ಹಿಂದೆ ಓಡಿದೆ. (ಹಾಸ್ಯಕ್ಕಲ್ಲ!) ಓಡಿಹೋದವನು ಒಂದು ಕಡಿದಾದ ಬಂಡೆಯ ಮೇಲೆ ಕುಳಿತನು. ನಾನೂ ಕುಳಿತೆ. ಕುಳಿತವನು ಕೆಳಗೆ ಬಾಗಿ ನೋಡಿದೆ. ಸುಮಾರು ಮೂವತ್ತು ನಾಲ್ವತ್ತು ಅಡಿಗಳಷ್ಟು ಎತ್ತರವಾಗಿತ್ತು.

"ಪುಟ್ಟಣ್ಣ, ಕೆಳಗಿಳಿಯೋಣ" ಎಂದೆ. ಇಬ್ಬರೂ ಚತುಷ್ಪಾದಿಗಳಾಗಿ ಜಾಗರೂಕತೆಯಿಂದ ಇಳಿದೆವು. ನೋಡುವಾಗ ಬಂಡೆಯ ಸಂದುಗಳಲ್ಲಿ ಏಳೆಂಟು ಕಣೆಹಂದಿಯ ಗುದ್ದು (ಗುಹೆ)ಗಳು ಕಂಡುಬಂದುವು. ಉದ್ದವಾದ ಕಣೆಗಳೂ ಗುದ್ದಿನ ಬಾಯಿಯಲ್ಲಿ ಬಿದ್ದಿದ್ದುವು. ಮುಳ್ಳು ಹಂದಿಗಳು ಹಿಂದೆ ಮುಂದೆ ತಿರುಗಿ ತಿರುಗಿ ನೆಲವೆಲ್ಲ ಸವೆದು ಹೋಗಿತ್ತು. ಉದ್ವೇಗದಿಂದ ಗುಹೆಗಳನ್ನು ಪರೀಕ್ಷಿಸುತ್ತಿದ್ದೆವು. ಅಷ್ಟರಲ್ಲಿಯೇ ಹೆಗ್ಗಡೆಯವರು ಕರೆದರು. ಮನಸಿಲ್ಲದ ಮನಸಿನಿಂದ ಬಂಡೆಗಳನ್ನೇರಿ ಮೇಲೆ ಬಂದೆವು.

ಹೆಗ್ಗಡೆಯವರ ಮುಖವೆಲ್ಲ ಊದಿಹೋಗಿತ್ತು. "ಈಗೇನು ಮಾಡೋದು?" ಎಂದರು. ಪುಟ್ಟಣ್ಣ "ಸಾಮ, ದಾನ, ಭೇದ ಎಲ್ಲಾ ಪೂರೈಸಿತು. ಇನ್ನು ದಂಡ! ಹಾಕಿ ಬೆಂಕೀನ!" ಎಂದು ತನ್ನ ಜೇಬಿನಲ್ಲಿದ್ದ ಬೆಂಕಿ ಪೆಟ್ಟಿಗೆಯನ್ನು ತೆಗೆದು ಅವರ ಕೈಗೆ ಕೊಟ್ಟನು.

ಅವೋಲೆ ಬೆಂಕಿ ಮಾಡಿ ಹೊಗೆ ಮಾಡಿದರು. ಪಾಪ! ಎಷ್ಟೋ ಹುಳುಗಳು ಸತ್ತುವು! "ಆದರಂತಹುದೆಷ್ಟೊ ಆಗಲಿ ಬೇಕಲ್ಲ ಲೋಕ ಪ್ರಸಿದ್ಧಿಯು ಜಯುದಲಿ!" ನಮ್ಮ ಬೆಂಕಿಯ ಮುಂದೆ ಹುಳುಗಳಾಟ ಏನು ಸಾಗೀತು? ನಾವೇ ಜಯಿಸಿದೆವು. ಲೂಟಿಗೆ ಪ್ರಾರಂಭವಾಯಿತು. ಅದುವರೆಗೂ ಪತ್ತೆಯಿಲ್ಲದೆ ದೂರ ಅಡಗಿದ್ದ ಇಬ್ರಾಹಿಯು ಬಾಯಿ ತೆರೆದುಕೊಂಡು ಓಡಿಬಂದ. ಹೆಗ್ಗಡೆಯವರು ಐದಾರು ಹಲ್ಲೆಗಳನ್ನು ಕಿತ್ತು ಬೋಗುಣಿಗೆ ಹಾಕಿದರು. ನಮಗೆಲ್ಲಾ ಹರುಷದ ಹಬ್ಬ! ಎಷ್ಟು ಹೊತ್ತಿಗೆ ಜೇನು ಬಾಯಿಗೆ ಬೀಳುವುದೋ ಎಂದು ಕಾತರಿಸಿದ್ದೆವು.

ಜೇನು ತಿನ್ನುವ ಮೊದಲು ನಾನು "ಜೈ ಭಗವಾನ್ ರಾಮಕೃಷ್ಣ" ಎಂದು ಇಬ್ರಾಹಿಯ ಕಡೆ ತಿರುಗಿ "ಲೋ, ಇಬ್ರಾಹಿ, ನಿಮ್ಮ ದೇವರ ನೆನೆಯೋ ಜೇನು ತಿನ್ನುವುದಕ್ಕೆ ಮುಂಚೆ. ಅಲ್ಲಾ ಹೋ ಅಕ್ಬರ್!" ಎಂದೆನು. ಇಬ್ರಾಹಿ "ನಮ್ಮ ದೇವರು ಬೇರೆ, ನಿಮ್ಮ ದೇವರು ಬೇರೆಯೋ?" ಎಂದನು. ಮುಂದೇನು ಸಂಭಾಷಣೆ ನಡೆಯುತಿತ್ತೋ ಗೊತ್ತಿಲ್ಲ. ಹಠಾತ್ತಾಗಿ ಟೈಗರು ರೋಜಿಯನ್ನು ಕಚ್ಚಿ ಮುರಿಯಲು ಪ್ರಾರಂಭಿಸಿ ದೊಡ್ಡ ದಾಂದಲೆ ಎಬ್ಬಿಸಿತು. ಪುಟ್ಟಣ್ಣ ದೊಡ್ಡದೊಂದು "ಲೊಟ್ಟ" ತೆಗೆದುಕೊಂಡು ಏಳೆಂಟು ಕಡುಬು ಹೇರಿ ಜಗಳ ನಿಲ್ಲಿಸಿದ. ಜಗಳಕ್ಕೆ ಕಾರಣ ಹಳೆಪೈಕದ ಪುಟ್ಟ ಜೇನು ತಿಂದು ಮೇಣ ಎಸೆದುದೇ!

ಇಬ್ರಾಹಿಯು ಊದಿ ವಿಕಾರವಾಗಿದ್ದ ಹೆಗ್ಗಡೆಯವರ ಮುಖ ನೋಡಿ ಅಳ್ಳೆ ಹಿಡಿದು ನಕ್ಕನು. ಪುಟ್ಟಣ್ಣ "ಯಾರಾದರೂ ಕೇಳಿದರೆ ಒಳ್ಳೇ ಹವದ ಕಾಡಿಗೆ ಹೋಗಿದ್ದೆ. ಸ್ವಲ್ಪ ಪುಷ್ಟಿಯಾಗಿ ಬಂದಿದ್ದೇನೆ ಎಂದುಬಿಡಿ" ಎಂದನು. ಎಲ್ಲರೊಡನೆ ಹೆಗ್ಗಡೆಯವರೂ ನಕ್ಕರು. ಅವರ ಮುಖವು ಮತ್ತಷ್ಟು ವಿಕಾರವಾಯಿತು. ಮತ್ತೆ ಎಲ್ಲರೂ ನಗೆಗಡಲಲ್ಲಿ ಮುಳುಗಿಹೋದರು. ನಾಯಿಗಳೆಲ್ಲ ಸುತ್ತ ಕುಳಿತು ನಮ್ಮನ್ನೇ ದುರುದುರು ನೋಡುತ್ತಿದ್ದುವು. ಕೆಲವು ಜೇನು ಹುಳುಗಳು ಜೇನುತುಪ್ಪದಲ್ಲಿ ಬಿದ್ದು ರೆಕ್ಕೆ ತೊಯ್ದು ಒದ್ದಾಡುತ್ತ ಹರಿಯು

ತ್ತಿದ್ದುವು. ಕಾಡು ಮೌನವಾಗಿತ್ತು. ಹೊತ್ತು ನೆತ್ತಿಗೇರಿತ್ತು. ಬನಗತ್ತಲೆ ಗಾಢವಾಗಿತ್ತು.

ಜೇನುತುಪ್ಪ ತಿನ್ನಲು ಸವಿಯಾಗಿತ್ತೆಂದು ಹೇಳಿದರೆ, ಓದಿದವರೆಲ್ಲ "ಹೌದೇ? ನಿಜವಾಗಿಯೂ?" ಎನ್ನದಿರುವುದಿಲ್ಲ. ಚೆನ್ನಾಗಿ ಮಾಗಿದ ಕೊಡಗಿನ ಕಿತ್ತಳೆ ಹಣ್ಣಿನ ತೊಳೆಯನ್ನು ಸಿಗಿದರೆ ಒಳಗಡೆ ಯಾವ ಬಣ್ಣ ಕಂಗೊಳಿಸುತ್ತದೆಯೋ ಅದೇ ಬಣ್ಣವಿತ್ತು ಜೇನು ಹಲ್ಲೆಗಳಿಗೆ!

ಜೇನುತುಪ್ಪವನ್ನೇನೋ ತಿಂದು ನಮಗೆಲ್ಲ ಸಂತೋಷವಾಯಿತು. ಆದರೆ ಒಂದು ವಿಷಾದದ ವಿಷಯ. ಅದೇನೆಂದರೆ, ಆಸೆಗೆ ತಕ್ಕಹಾಗೆ ತುಪ್ಪ ತಿನ್ನಲು ಆಗಲಿಲ್ಲ. ತುಪ್ಪ ಕಡಿಮೆಯಾಗಿತ್ತು ಎಂದಲ್ಲ. ಜೇನು ಯಥೇಚ್ಛವಾಗಿತ್ತು. ಮನೆಗೂ ಮುಕ್ಕಾಲು ಬೋಗುಣಿ ತುಂಬಾ ತೆಗೆದುಕೊಂಡು ಹೋದೆವು. ಆದರೆ ಸ್ವಲ್ಪ ತಿನ್ನುವುದರೊಳಗಾಗಿ ನನಗಂತೂ ಅದರ ಅತಿ ಮಾಧುರ್ಯವು ಮುಖ ಮುರಿದುಬಿಟ್ಟಿತು. "ಆಸೆ ಭೀಮ, ಸಾಮರ್ಥ್ಯ ಸುಧಾಮ!" ಹೀಗಾಗಿಬಿಟ್ಟಿತು ನನ್ನ ಗತಿ! ಅವರೆಲ್ಲ ಹೊಡೆದೇ ಹೊಡೆದರು ಕಂಠಪೂರ್ತಿಯಾಗಿ!

[ಈ ಪ್ರಬಂಧವನ್ನು ಬರೆದದ್ದು ಐದು ವರುಷಗಳ ಹಿಂದೆ. ಆಗಲೇ ಜೀವನರಂಗದಲ್ಲಿ ಎಷ್ಟೋ ವ್ಯತ್ಯಾಸಗಳಾಗಿಹೋಗಿವೆ. ಒಂದು ವಿಷಾದದ ಸುದ್ದಿಯೆಂದರೆ, ಹೋದ ವರುಷ ನಾನು ಬೇಸಗೆ ರಜಕ್ಕೆ ಹೋದಾಗ ಎಂಟು ದಿನಗಳ ಹಿಂದೆ ಪುಟ್ಟಣ್ಣ ಹಠಾತ್ತಾಗಿ ತೀರಿಕೊಂಡನೆಂದು ಕೇಳಿ ಬಹಳ ಮರುಗಿದೆ. ಬೇಟೆಯಲ್ಲಿ ಅವನು ನನಗೆ ಜೊತೆಗಾರನೂ ಮಾರ್ಗದರ್ಶಿಯೂ ಆಗಿದ್ದ. ಅವನ ವಿಚಾರವಾಗಿ ಇನ್ನೊಮ್ಮೆ ಪ್ರಸ್ತಾಪಿಸುತ್ತೇನೆ. ಸತ್ತಮೇಲೆ ಎಲ್ಲರೂ ಮಹಾತ್ಮರೇ ಅಲ್ಲವೆ? ಅವನ ಆತ್ಮಕ್ಕೆ ಶಾಂತಿಯಿರಲಿ!]

---

# ಕತೆಗಾರ ಮಂಜಣ್ಣ

ಮಂಜಣ್ಣ ನಮ್ಮ ಮನೆಯ ಆಳು; ಬಹಳ ಹಳೆಯ ಮನುಷ್ಯ; ಅಂದರೆ ಸುಮಾರು ಅರವತ್ತು ವರ್ಷ. ಅವನ ಮುಖದ ತುಂಬಾ ಬಿಳಿಯ ಗಡ್ಡ, ಮೀಸೆ. ತಲೆಯತುಂಬಾ ಹಣ್ಣುಹಣ್ಣು ಕೂದಲು. ಅವನ ಗಡ್ಡವೇನು ಮಲೆನಾಡಿನ ಗಿರಿಗಳ ಮೇಲೆ ನಿಬಿಡವಾಗಿ ಬೆಳೆವ ತರುನಿಕರದಂತೆ ಉದ್ದವಾಗಿ ನೀಳವಾಗಿರಲಿಲ್ಲ. ಬಯಲು ಸೀಮೆಯ ಗುಡ್ಡಗಳಲ್ಲಿ ಬೆಳೆಯುವ ವಿರಳವಾದ ಪೊದೆಗಳಂತೆ ಇತ್ತು. ಸುಲಭ ವಾಗಿ ಹೇಳುವುದಾದರೆ ಇಲಿ ತರಿದಂತೆ ಇತ್ತು!

ಅದಕ್ಕೊಂದು ಕಾರಣ ಇದೆ. ನಮ್ಮ ಮಂಜಣ್ಣ ಕ್ಷೌರಕ ರೊಡನೆ ಅಸಹಕಾರ ಮಾಡಿದ್ದ. ವಪನವೆಂದರೆ ಅವನಿಗೆ ನಮ್ಮೆಲ್ಲರಿ ಗಿರುವಂತೆ ಒಂದು ವೈಭವವಾಗಿರಲಿಲ್ಲ. ಅವನಿಗೆ ಕುಡುಗೋಲೇ ಮುಂಡನದ ಕೈದು! ಗಡ್ಡ ಉದ್ದವಾದಕೂಡಲೇ ಅದರ ತುದಿಯನ್ನು ಒಟ್ಟುಗೂಡಿಸಿ, ಮಸೆದು ಹರಿತಮಾಡಿದ ಕುಡುಗೋಲಿನಿಂದ ಚರಚರನೆ ಕೊಯ್ಯುತ್ತಿದ್ದ; ಬೆಳೆದು ಹಣ್ಣಾಗಿ ನಿಂತ ಬತ್ತದ ಪೈರನ್ನು ಸವರಿ ರಾಶಿಮಾಡುವಂತೆ! ಈಗ ಅದನ್ನು ಯೋಚಿಸಿಕೊಂಡರೆ ನಗುಬರು ತ್ತದೆ; ಆಗ ಬರುತ್ತಿರಲಿಲ್ಲ.

ಮಂಜಣ್ಣನ ಕರ್ಮಾಚರಣೆಗಳು ಕೂಡ ದೀರ್ಘವಾಗಿದ್ದುವು. ಅವನು ಸ್ನಾನಮಾಡುವುದು ಒಂದು ಗಂಟೆ. ಅದಾದಮೇಲೆ ಬಾವಿಯ ಹಾಸುಗಲ್ಲಿನ ಮೇಲೆ ಬೆತ್ತದಿಂದ ಹೆಣೆದು ಮಾಡಿದ ನಾಮದ ಪೆಟ್ಟಿಗೆ ಯೊಂದನ್ನು ಬಿಚ್ಚಿಟ್ಟು ಕುಳಿತುಕೊಳ್ಳುವನು. ಅದರೊಳಗಿಂದ, ಒಡೆದು ಹಾಳಾದ ಆರುಕಾಸಿನ ಅಗಲದ ಕನ್ನಡಿ, ನಾಮದ ಕಡ್ಡಿ, ಬಿಳಿಯನಾಮ, ಕೆಂಪುನಾಮ, ಒಣಗಿದ ತುಳಸಿಯದಳ ಇವೇ ಮೊದ ದುವು ಒಂದಾದಮೇಲೊಂದು ಮೆಲ್ಲನೆ ಮೂಡುತ್ತಿದ್ದುವು. ಆಮೇಲೆ ನಾಮಗಳು ನೆಟ್ಟಗಾಗಲು ಪ್ರಾರಂಭ! ಹಣೆಯ ಮೇಲೆ ಮೂರು,

ಎದೆಯ ನಡುವೆ ಮೂರು, ನಾಭಿಯ ಬಳಿ ಮೂರು, ಬೆನ್ನಿಗೆ ಒಂದು. ಬಾಕಿ ಸರಿಯಾಗಿ ನೆನಪಿಲ್ಲ.

ಮಂಜಣ್ಣನೆಂದರೆ ನಮಗೆಲ್ಲ ಪ್ರಾಣ; ಏಕೆಂದರೆ ನಮಗೆಲ್ಲ ಅವನೇ ಕತೆಗಾರ! ಆ ವೃದ್ಧಮೂರ್ತಿಯನ್ನು ನೋಡಿದಕೂಡಲೇ ಹುಡುಗರಾದ ನಮಗೆ ಅವನು ಆಳು ಎಂಬುದು ಮರೆತುಹೋಗಿ, ಅವನಲ್ಲಿ ಗುರುಭಾವ ಉಂಟಾಗುತಿತ್ತು! ಲವಕುಶರಿಗೆ ವಾಲ್ಮೀಕಿ ಯನ್ನು ಕಂಡರೆ ಯಾವ ಭಾವ ಉಂಟಾಗುತ್ತಿತ್ತೋ ಆ ಭಾವ. ಆದ ರೇನು? ನಮಗೆ ಗುರು, ನಮ್ಮ ಹಿರಿಯರಿಗೆ ಆಳು! ಅವನೂ ದಿನವೂ ಎಲ್ಲರಂತೆ ಕೆಲಸಕ್ಕೆ ಹೋಗಬೇಕಾಗಿತ್ತು. ನಾನು ಒಂದೊಂದುಸಾರಿ ಹೀಗೆಂದು ಯೋಚಿಸುತ್ತಿದ್ದೆ; ನಾನು ಯಜಮಾನನಾದರೆ ಮಂಜಣ್ಣ ನಿಗೆ ಕತೆ ಹೇಳುವ ಕೆಲಸವೊಂದನ್ನೇ ಕೊಡುವೆನೆಂದು! ಮುಗ್ಧಾ ಲೋಚನೆ! ನಾನು ಏಳೆಂಟು ವರ್ಷದ ಹುಡುಗ; ಮಂಜಣ್ಣ ಅರ ವತ್ತು ವರ್ಷದ ಮುದುಕ! ನಾನು ಯಜಮಾನನಾಗುವತನಕ ಅವನು ಬದುಕಿರುವನೆ? ಹೌದು, ಆಗ ಇರುವನೆಂದೇ ಭಾವಿಸಿದ್ದೆ!

ಹೊತ್ತು ಎಷ್ಟುಬೇಗ ಮುಳುಗುವುದೋ ಎಂದು ನಾವೆಲ್ಲಾ ಹಾರೈಕೆಯಿಂದ ಎದುರುನೋಡುತ್ತಾ ಇದ್ದೆವು. ಏಕೆಂದರೆ ಕತ್ತಲಾ ಗಲು ಮಂಜಣ್ಣ ನಮಗೆ ಕತೆ ಹೇಳುತ್ತಿದ್ದ. ಮಂಜಣ್ಣನೆಂದರೆ ನಿಜ ವಾಗಿಯೂ "ಕಥಾ ಸರಿತ್ಸಾಗರ." ಅವೆಲ್ಲಾ ಅವನ ಕತೆಗಳೋ? ಅಥವಾ ಅನ್ಯರಿಂದ ಕಲಿತವುಗಳೋ? ನಮಗೆ ತಿಳಿಯದು. ಅವನನ್ನೇ ಕೇಳಿದ್ದರೆ ಹೇಳುತ್ತಿದ್ದನೋ ಏನೋ! ಆದರೆ ಅಂದು ನಾವು 'ಸ್ವಂತ' ಮತ್ತು 'ಅನ್ಯ' ಇವುಗಳ ಪ್ರಭೇದಗಳು ಉಂಟೆಂದು ಕೂಡ ಭಾವಿಸಿರ ಲಿಲ್ಲ. ಕತೆಗಂತೂ ಅವನು ಕಲ್ಪವೃಕ್ಷವೇ ಸರಿ! "ಮಂಜಣ್ಣ ಕತೆ ಹೇಳೊ" ಎಂದು ಹೇಳುವುದೇ ತಡ ಕತೆಯ ಪ್ರವಾಹವು ಹಲ್ಲಿಲ್ಲದ ಅವನ ಮುದಿಬಾಯಿಂದ ಹೊರಸೂಸುತ್ತಿತ್ತು. ನಾವೆಲ್ಲ ಒಂದೇ ಮನಸ್ಸಿನಿಂದ ಕತೆ ಕೇಳುತ್ತಾ ಕುಳಿತು ಬಿಡುತ್ತಿದ್ದೆವು.

ಮೇಲೆ ಹೇಳಿದಂಥಾ ಒಂದು ದಿನ ಕತ್ತಲಾಗುತಿತ್ತು. ಮುಂ ಗಾರು ಮಳೆಯು ಬೇಸರವನ್ನುಂಟುಮಾಡುವಂತೆ ಜಿಕ್ರೆಂದು ಸುರಿ

ಯುತ್ತಿತ್ತು. ನಾನು ಕಿಟ್ಟು ಇಬ್ಬರೂ ಮುರ ಬೇಯಿಸುವ ಒಲೆಯ ಒಳ ಚಳಿಕಾಯಿಸುತ್ತ ಕುಳಿತಿದ್ದೆವು. ದೊಡ್ಡ ಒಲೆಯ ಬೆಂಕಿಯ ಪ್ರಕಾಶವು ದೇದೀಪ್ಯಮಾನವಾಗಿತ್ತು. ವಾಸು, ಸೀತೆ, ಇಬ್ಬರನ್ನೂ ಹಲಸಿನ ಬಿತ್ತ ತರುವುದಕ್ಕೆ ಕಳಿಸಿದ್ದೆವು. ಹಲಸಿನ ಬಿತ್ತಗಳ ಸವಾರಿ ಬಂತು. ಎಲ್ಲರೂ ಸೇರಿ ಅವುಗಳನ್ನು ಕಚ್ಚಿ ಕಚ್ಚಿ ಕೆಳಗಿಟ್ಟೆವು. ಏಕೆಂದರೆ ಕಚ್ಚಿ ಗಾಯಮಾಡಿ ಒಲೆಗೆ ಹಾಕದಿದ್ದರೆ ಅವು ಸಿಡಿಯುವುವು ಎಂಬ ಭಯ! ಹೆಚ್ಚೇನು? ನಮ್ಮ ಪಾಲಿಗೆ ಅದೊಂದು ದೊಡ್ಡ ನಂಬಿಕೆಯೇ ಆಗಿತ್ತು. ಬಿತ್ತಗಳನ್ನು ಇನ್ನೂ ಒಲೆಗೆ ಹಾಕಿರಲಿಲ್ಲ. ದಹನ ಸಂಸ್ಕಾರ ಮುಗಿಯುವುದಕ್ಕೆ ಮುಂಚೆಯೇ ನಮ್ಮ ಅಪ್ಪಯ್ಯ, ಚಿಕ್ಕಪ್ಪಯ್ಯ, ಇವರ ಮಾತು ಕೇಳಿಸಿತು. ಬೀಜಗಳನ್ನೆಲ್ಲಾ ಹುದುಗಿಸಿಟ್ಟು ಏನೂ ತಿಳಿಯದವರಂತೆ ಕುಳಿತೆವು. ಸ್ವಲ್ಪಹೊತ್ತಿಗೆ ಮುಂಚೆ ಒಬ್ಬನನ್ನು ಕೊಲೆಮಾಡಿ ಸುಲಿಗೆಮಾಡಲು ಸಿದ್ಧರಾಗಿದ್ದ ಠಕ್ಕರಂತೆ ಗುಂಪುಸೇರಿ ಕುಳಿತಿದ್ದ ನಾವು ಈಗ ವನಗಳಲ್ಲಿ ವಿಕಸಿತವಾಗಿ ತಲೆದೂಗಿ ನಲಿನಲಿವ ಮುಗ್ಧ ಕುಸುಮಗಳಂತೆ ನಟಿಸಿ ಕುಳಿತೆವು.

ಎಲ್ಲರೂ ಬಂದರು. ಗದ್ದೆಯ ಕೆಲಸಕ್ಕೆ ಹೋಗಿದ್ದ ಸಿದ್ದ, ಪುಟ್ಟ, ಇವರು ಬಂದು "ಒಂದೀಟು ಜಾಗ ಬಿಡಿ, ಅಯ್ಯ! ಮಳೇಲಿ ನೆಂದು ಬಂದೀವಿ. ಒಂದೀಟು ಚಳಿಕಾಸ್ಕೊಂಡು ಹೋಗ್ತೀವಿ" ಎಂದರು. ನಾವೆಲ್ಲರೂ ಒಟ್ಟಿಗೆ "ಜಾಗ ಇಲ್ಲ, ಹೋಗ್ರೋ! ನಮಗೂ ಚಳಿ" ಎಂದೆವು. ನಾವು ಮನೆಯಲ್ಲಿಯೇ ಇದ್ದವರು, ಅವರು ಗದ್ದೆಗಳಿಗೆ ಹೋಗಿ ಮಳೆಯಲ್ಲಿ ಕೊಯ್ದು ಬಳಲಿ ಬಂದವರು! ಸ್ವಲ್ಪ ಹೊತ್ತಿನ ಮೇಲೆ ಮಂಜಣ್ಣನೂ ಬಂದ. ಬಂದವನು "ಜಾಗ ಬಿಡಿ" ಎಂದು ಕೇಳಲೇ ಇಲ್ಲ. ಬರಬರುತ್ತಾ ಕತೆ ಹೇಳುತ್ತಲೇ ಬಂದ. ನಾವೆಲ್ಲ ಅವನ ಕಡೆ ತಿರುಗಿದೆವು.

"ಒಂದೂರಿನಲ್ಲಿ ಒಬ್ಬನಿದ್ದ" ಎಂದು ಪ್ರಾರಂಭಿಸಿದನು. ನಮ್ಮ ಆನಂದಕ್ಕೆ ಪಾರವೇ ಇಲ್ಲದ ಹಾಗಾಯಿತು. ನಾವು ನಾಲ್ವರೂ ಒಟ್ಟಿಗೆ "ಆಮೇಲೆ!" ಎಂದೆವು.

"ಅವನೊಂದು ಕುಂಬಳ ಬೀಳು ನಟ್ಟಿದ್ದ."

ನಾನು 'ಹುಂ' ಎಂದೆ. ಏಕೆಂದರೆ 'ಹುಂ ಗುಟ್ಟು'ವರಿಲ್ಲದೆ ಕತೆಗೆ ಮುಂದೆ ಸಾಗಲು ಕಾಲೇ ಬರುತ್ತಿರಲಿಲ್ಲ.

"ಅದರಲ್ಲೊಂದು ಹೂ ಬಿಟ್ಟಿತು."

"ಹುಂ! ಹುಂ!"

"ಆಮೇಲೆ ಒಂದು ಮಿಡಿಯಾಯ್ತು."

ಈ ಸಾರಿ ನಾನೂ ಕಿಟ್ಟೂ ಇಬ್ಬರೂ ಹೂಂಗುಟ್ಟಿದೆವು.

"ಆ ಮಿಡಿ ಒಂದಿಷ್ಟು ದೊಡ್ಡದಾಯ್ತು" ಹೀಗೆಂದು ಮಂಜಣ್ಣ ತನ್ನ ಎರಡು ಕೈಗಳಿಂದ ಮಿಡಿಯ ಗಾತ್ರವನ್ನು ತೋರಿಸುವವನಂತೆ ನಟಿಸುತ್ತಾ ನನಗೂ ಕಿಟ್ಟುಗೂ ಮಧ್ಯೆ ಇದ್ದ ಸ್ವಲ್ಪ ಸ್ಥಳದಲ್ಲಿ ಕೈಯಿಟ್ಟ.

ನಾವು "ಹುಂ" ಎಂದೆವು.

"ಸ್ವಲ್ಪ ದಿವಸ ಆದಮೇಲೆ, ಇಷ್ಟು ದೊಡ್ಡದಾಯ್ತು" ಎಂದು ಕೈಗಳನ್ನು ಇನ್ನೂ ಅಗಲಿಸಿದನು.

ಮತ್ತೆ "ಹುಂ" ಎಂದೆವು.

"ಆಮೇಲೆ ಇಷ್ಟು ದೊಡ್ಡದಾಯ್ತು" ಎಂದು ಇನ್ನೂ ಕೈಗಳನ್ನು ಅಗಲಿಸಲು ಪ್ರಯತ್ನಪಟ್ಟ. ಆದರೆ ನಾನೂ ಕಿಟ್ಟೂ ಇಬ್ಬರೂ ಕಲ್ಲಿನಂತೆ ಕೂತಿದ್ದೆವು.

ಮಂಜಣ್ಣ "ಸ್ವಲ್ಪ ಜಾಗ ಬಿಡಿ, ಕತೆ ಹೇಳಿ ತೋರಿಸುವುದಕ್ಕೆ ಆಗುವುದಿಲ್ಲ" ಎಂದ. ನಾವೂ ಸರಿದೆವು.

ಒಂದು ಕುಂಬಳಕಾಯಿ ಎಷ್ಟು ಕಡಿಮೆ ಅಂದರೂ ಒಂದು ಅಡಿಯಷ್ಟಾದರೂ ದಪ್ಪ ಬೆಳೆಯುತ್ತದೆ. ನಿಜವಾದ ಕುಂಬಳಕಾಯಿಯೇ ಒಂದು ಅಡಿ ಬೆಳೆದ ಮೇಲೆ, ಕತೆಯ ಕುಂಬಳಕಾಯನ್ನು ಕೇಳಬೇಕೆ? ಎಷ್ಟು ಬೆಳೆಯಿತೆಂದರೂ ಹೂಂಗುಡಲೇಬೇಕು. ಆದರೆ ಮಂಜಣ್ಣನ ಕತೆ ಕುಂಬಳಕಾಯಿ ಹೆಚ್ಚು ದಪ್ಪ ಬೆಳೆಯಲಿಲ್ಲ. ಅವನಿಗೆ ಕೂರುವುದಕ್ಕೆ ಎಷ್ಟು ಜಾಗ ಬೇಕಿತ್ತೋ ಅಷ್ಟು ದೊಡ್ಡದಾಗಿ ಬೆಳೆಯಿತು. ಮಂಜಣ್ಣ ಇದ್ದಕ್ಕಿದ್ದಹಾಗೆಯೇ ಬೆಂಕಿ ಕಾಯಿಸುತ್ತಾ ಕುಳಿತೇಬಿಟ್ಟ. ಕೆಟ್ಟವರೇ ನಾನು, ಕಿಟ್ಟು!

ಎಲ್ಲರೂ ನಗಲಾರಂಭಿಸಿದರು. ನಮ್ಮಿಬ್ಬರಿಗೂ ಅವಮಾನವಾದಂತಾಗಿ ಅಳು ಬಂದಿತು. ಆದರೆ ಸಹಿಸಲಾರದ ನಗುವು ಅಳುವನ್ನು ಮೀರಿ ಹೊರಹೊರಟಿತು. ಮತ್ತೆ ಏನೇನೋ ಪ್ರಯತ್ನಮಾಡಿ ಸ್ಥಳ ಸಂಪಾದನೆ ಮಾಡಿದೆವು. ಆದರೆ ಬಹಳ ಇಕ್ಕಟ್ಟಾಗಿತ್ತು.

ಸ್ವಲ್ಪ ಹೊತ್ತಾದ ಮೇಲೆ ಕಿಟ್ಟು "ಆಮೇಲೆ?" ಎಂದ. ನಾವೆಲ್ಲರೂ "ಹೌದು! ಹೌದು! ಮರೆತಿದ್ದೆವು. ಆಮೇಲೆ?" ಎಂದೆವು. ಮಂಜಣ್ಣನು ಮೌನಿಯಾಗಿದ್ದ. ನಸುನಗುತ್ತಿದ್ದನೋ ಏನೋ? ಆ ಗದ್ದಗಳ ದಾಂಧಲೆಯಲ್ಲಿ ನಮಗೆ ಗೊತ್ತಾಗಲೇ ಇಲ್ಲ.

ಕಿಟ್ಟು ಪುನಃ "ಆಮೇಲೆ?" ಎಂದ. ಮಂಜಣ್ಣ ಮಾತಾಡಲೇ ಇಲ್ಲ. ತರುವಾಯ ಕಿಟ್ಟು ಅವನ ಗಡ್ಡವನ್ನು ಮೆಲ್ಲನೆ ಹಿಡಿದುಕೊಂಡು ಅಲ್ಲಾಡಿಸುತ್ತಾ "ಆಮೇಲೆ?" ಎಂದ.

ಮಂಜಣ್ಣ ಮತ್ತೂ ಮಾತಾಡಲಿಲ್ಲ. ಕಿಟ್ಟುಗೆ ಒಂದು ವಿಧವಾದ ಸಿಟ್ಟು ಬಂತು. ಗಡ್ಡವನ್ನು ಬಲವಾಗಿ ಹಿಡಿದು ಜಗ್ಗಿಸುತ್ತಾ "ಆಮೇಲೆ?" ಎಂದು ಗರ್ಜಿಸಿದ. ಮಂಜಣ್ಣನಿಗೆ ತುಂಬಾ ಯಾತನೆಯಾಯಿತು.

"ಅಯ್ಯೋ! ಹೇಳ್ತೀನಪ್ಪಾ" ಎಂದು ಗಟ್ಟಿಯಾಗಿ ರೋದನಧ್ವನಿಯಿಂದ ಕೂಗಿಕೊಂಡ. ಪಾಪ, ಮುದುಕನಿಗೆ ಬಹಳ ನೋವಾಗಿರಬೇಕು. ನಮ್ಮ ಮನಸ್ಸೆಲ್ಲಾ ಕರಗಿ ನೀರಾಗಿಹೋಯಿತು.

"ಮಂಜಣ್ಣ! ಮಂಜಣ್ಣ!" ಎಂದೆವು. ನಮಗೆ ವ್ಯಸನ ಗಾಭರಿಗಳು ಒಂದೇ ಬಾರಿ ಉಂಟಾದುವು. ಕಿಟ್ಟು ಅಳಲಾರಂಭಿಸಿದ. ಪೆಟ್ಟೆಲ್ಲಾ ಮಂಜಣ್ಣಗೆ ನೋವೆಲ್ಲಾ ಕಿಟ್ಟಣ್ಣಗೆ ಎನ್ನುವಹಾಗೆ. ಮಂಜಣ್ಣ ಕಿಟ್ಟುವನ್ನು ಪ್ರೀತಿಪೂರ್ವಕವಾದ ಮಾತುಗಳಿಂದ ಸಮಾಧಾನಗೊಳಿಸಿದನು. ಆದರೂ ಕಿಟ್ಟು ನೀರವವಾಗಿ ಬಿಕ್ಕಿಬಿಕ್ಕಿ ಅಳುತ್ತಲೇ ಇದ್ದ.

ನಾನು "ಮಂಜಣ್ಣಾ ಆಮೇಲೇನಾಯ್ತು? ಹೇಳೋ!" ಎಂದೆ.

"ತಿಂದ" ಎಂದನು. ಕತೆ ಪೂರೈಸಿತೆಂದು ನಮ್ಮ ಮನಸ್ಸೆಲ್ಲಾ

ಶಾಂತವಾಯಿತು. ಕಿಟ್ಟು ಅಳುವನ್ನು ನಿಲ್ಲಿಸಿದ್ದರೂ ಖಿನ್ನನಾಗಿಯೇ ಇದ್ದ.

ಇನ್ನೊಂದು ಕತೆ ಕೇಳಬೇಕೆಂದು ನಮಗೆಲ್ಲ ತುಂಬಾ ಕುತೂಹಲ. ನಮಗೇನು ಅಂಥಾ ಕತೆ, ಇಂಥಾ ಕತೆ, ಹಾಗಿರಬೇಕು, ಹೀಗಿರಬೇಕು, ಎಂಬ ಭಾವನೆಯೇ ಇರಲಿಲ್ಲ. ಅಂತೂ ಕತೆಯಾದರೆ ಸರಿ. ಅನೇಕಸಾರಿ ಮಂಜಣ್ಣ ನಮ್ಮ ಕಾಟ ತಡೆಯಲಾರದೆ ಎಂತೆಂಥಾ ಕಥೆಗಳನ್ನೋ ಹೇಳಿಬಿಟ್ಟಿದ್ದಾನೆ. ಒಂದು ದಿನ 'ಕತೆ ಹೇಳು' ಎಂದು ಕಾಡಿಸಿದೆವು. ಅವನು ಹೇಳಿದ್ದು ಈ ಕತೆ:

" ಒಂದೂರಿನಲ್ಲಿ ಒಬ್ಬನಿದ್ದ. ಅವನು ಊಟಕ್ಕೆ ಕೂತಿದ್ದ. ಸ್ವಲ್ಪ ಹೊತ್ತಾದ ಮೇಲೆ ಊಟ ಆಯ್ತು. ಬಳ್ಳಿ ಬಿಟ್ಟಿದ್ದ. ಆಮೇಲೆ ನೆಗೆದುಬಿದ್ದ!" ಇದೂ ನಮಗೊಂದು ಕತೆ. ಪ್ರಪಂಚದಲ್ಲೆಲ್ಲಾ ನಮ್ಮಂಥವರೇ ಇದ್ದಿದ್ದರೆ ಕತೆಗಾರರಿಗೆ ಎಷ್ಟು ಸುಲಭವಾಗುತ್ತಿತ್ತು! ಮತ್ತೊಂದು ದಿನ ಇನ್ನೊಂದು ಕತೆ:

" ಒಂದೂರಿನಲ್ಲಿ ಒಬ್ಬಳಿದ್ದಳು. ಅವಳು ಬಾವಿಗೆ ನೀರು ಸೇದುವುದಕ್ಕೆ ಹೋದಳು. ಹಗ್ಗ ತುಂಡಾಗಿ ಕೊಡ ನೀರಿಗೆ ಬಿತ್ತು." 'ಹುಂ' ಎನ್ನುವುದೊಂದು ಬ್ರಹ್ಮನಿಯಮವಷ್ಟೆ? ನಾವೂ ಹೂಂಗುಡಲು ಬದ್ಧರಾಗಿದ್ದೆವು.

ಇಷ್ಟು ಹೇಳಿದವನು ನಾವು 'ಹುಂ' ಎನ್ನಲು; 'ಹೂಂ' ಎಂದರೆ ಕೊಡ ಮೇಲೆ ಬರ್ತದೆಯೇ? ಎಂದ.

" ಇಲ್ಲ" ಎಂದೆವು.

" ಇಲ್ಲ ಅಂದರೆ ಬರ್ತದೆಯೇ?"

" ಇಲ್ಲಾ!" ಎಂದು ಗಟ್ಟಿಯಾಗಿ ಕೂಗಿದೆವು.

" ಇಲ್ಲಾ!! ಎಂದರೆ ಬರ್ತದೆಯೇ?" ಎಂದು ನಕ್ಕನು.

ನಾವು ಅಳುವವರಂತೆ ನಟಿಸಲು "ಅತ್ತರೆ ಬರ್ತದೆಯೇ?' ಎಂದ.

" ಅಯ್ಯೊ!" ಎಂದು ಕೂಗಿದೆವು. " ಅಯ್ಯೊ! ಎಂದರೆ ಬರ್ತದೆಯೆ?" ಎಂದ. ಮೌನವಾದರೆ ಇವನೇನು ಮಾಡುವನೆಂದು ಸುಮ್ಮ

ನಾಗಲು "ಸುಮ್ಮನೆ ಕುಳಿತರೆ ಬರ್ತ್ತದೆಯೆ?" ಎಂದ. ಹೀಗೆಲ್ಲಾ ಮಾಡಿ ನಮ್ಮನ್ನು ಪೀಡಿಸುವನು.

ಆ ದಿಸವೂ ಮಂಜಣ್ಣನಿಂದ ಒಂದು ಕತೆ ಕೇಳಬೇಕೆಂದು ನಮಗೆಲ್ಲ ತುಂಬಾ ಆಸೆ. ಆದರೆ ಅವನನ್ನು ಬಲಾತ್ಕರಿಸುವ ಅಧಿಕಾರವನ್ನು ಕಿಟ್ಟನ ದೆಸೆಯಿಂದ ಕಳಕೊಂಡುಬಿಟ್ಟಿದ್ದೆವು. ಕಡೆಗೆ ಮಂಜಣ್ಣನನ್ನು ಬೇಡಿಕೊಂಡೆವು. ಭಗೀರಥ ಪ್ರಯತ್ನಮಾಡಿ ಅಂತೂ ಅವನನ್ನು ಒಪ್ಪಿಸಿದೆವು. ಅಂದರೆ ಭಗೀರಥನ ಪ್ರಯತ್ನಕ್ಕಿಂತಲೂ ನಮ್ಮದೇ ಅತಿಶಯವಾದುದರಿಂದ ಅವನ ಪ್ರಯತ್ನವನ್ನೇ ನಮ್ಮದಕ್ಕೆ ಹೋಲಿಸುವುದೇ ಸರಿಯಾದುದೆಂದು ನನ್ನ ಮನಸ್ಸಿಗೆ ತೋರುತ್ತದೆ. ಅದು ಹೇಗಾದರೂ ಇರಲಿ. ಅಂತೂ ಮಂಜಣ್ಣ ಕತೆ ಹೇಳಲು ಒಪ್ಪಿಕೊಂಡ.

ಇನ್ನೇನು ಮಂಜಣ್ಣ ಕತೆ ಹೇಳಲು ಪ್ರಾರಂಭಿಸಬೇಕು. ಗಂಟಲನ್ನೂ ಸರಿಮಾಡಿಕೊಂಡ. "ಒಂದೂರಿನಲ್ಲಿ" ಎಂದಿದ್ದ. ಅಷ್ಟರಲ್ಲಿ (ನಮ್ಮ ಗ್ರಹಚಾರ!) ಚಿಕ್ಕಮ್ಮ ಬಂದು ನಮ್ಮನ್ನೆಲ್ಲಾ ಊಟಕ್ಕೆ ಕರೆದರು. ನಮ್ಮ ಎದೆಗೆ ಸಿಡಿಲು ಬಡಿದಂತಾಯಿತು. ಮನಸ್ಸಿನಲ್ಲಿಯೇ "ಈ ಹಾಳು ಊಟಕ್ಕೆ ಬೆಂಕಿ ಹಾಕ!" ಎಂದಂದುಕೊಂಡೆವು. ನಮಗೆ ಈಗಿನ ಬುದ್ಧಿ ಆಗ ಇದ್ದಿದ್ದರೆ "ಊಟದ ಹಾವಳಿ" ಎಂಬ ಒಂದು ದೊಡ್ಡ ಗ್ರಂಥವನ್ನೇ ಬರೆದು ಮುದ್ರಿಸಿ ಪುಕ್ಕಟೆಯಾಗಿಯೆ ಹಂಚಿಬಿಡುತ್ತಿದ್ದೆವು. ಅಂತೂ ಮಾರಿಯ ಹರಕೆಗೆ ಹೋಗುವ ಕುರಿಗಳಂತೆ ಅಡುಗೆ ಮನೆಗೆ ಹೋದೆವು. ಹೋದುದೂ ಹೆದರಿಕೆಯಿಂದ ಹೊರತೂ ಹಸಿವೆಯಿಂದ ಅಲ್ಲವೇ ಅಲ್ಲ. ಅನ್ನವನ್ನು ಗಬಗಬನೆ ತಿಂದು ಬಂದೇಬಿಟ್ಟೆವು. ಬಂದವರು ಎಲ್ಲರೂ ಕತೆಗಾರ ಮಂಜಣ್ಣನ ಸುತ್ತಲೂ ಕುಳಿತೆವು; ವರವನ್ನು ದಯಪಾಲಿಸುವೆನೆಂದು ಪ್ರತ್ಯಕ್ಷನಾದ ಶ್ರೀಮನ್ನಾರಾಯಣನ ಮುಂದೆ ಮೊಳಕಾಲೂರಿ ಕುಳಿತುಕೊಳ್ಳುವ ಭಕ್ತರಂತೆ!

ಕಷ್ಟಗಳು ಬಂದರೆ ಪರಂಪರೆಯಾಗಿ ಬರುತ್ತವೆ ಎಂಬುದೇನೋ ಖಂಡಿತವಾಗಿಯೂ ಸುಳ್ಳು ಮಾತಲ್ಲ. ಅದು ಚೆನ್ನಾಗಿ ನಮ್ಮ ಅನು

ಭವಕ್ಕೆ ಬಂದ ಸಂಗತಿ. ಎಡರು ಇನ್ನೇನೂ ಅಲ್ಲ. ಮಂಜಣ್ಣನನ್ನು ಊಟಕ್ಕೆ ಕರೆದರು. ಅವನಿದ್ದಾಗ ನಾವಿಲ್ಲ; ನಾವಿದ್ದಾಗ ಅವನಿಲ್ಲ—ಹಲ್ಲಿದ್ದಾಗ ಕಡಲೆಯಿಲ್ಲ; ಕಡಲೆಯಿದ್ದಾಗ ಹಲ್ಲಿಲ್ಲ ಎಂಬ ಗಾದೆಯಂತೆ. ಮಂಜಣ್ಣ ಊಟಕ್ಕೆ ಹೊರಟ. "ಮಂಜಣ್ಣ ಬೇಗ ಬಾ" ಎಂದೆವು. ನಮ್ಮ ದನಿಯು ಕನಿಕರಣೀಯವಾಗಿತ್ತು. ಆದರೆ ಒಂದು ವಿಚಾರ ಮಾತ್ರ ನಮಗಾರಿಗೂ ಬಗೆಹರಿಯಲಿಲ್ಲ. ಯಾವುದೆಂದರೆ: ನಾವಂತೂ ಊಟಕ್ಕೆ ಹೋಗದಿದ್ದರೆ ಏಟು ಬೀಳುತ್ತಿತ್ತೆಂದು ಹೆದರಿ ಹೋದೆವು; ಮಂಜಣ್ಣ "ಒಲ್ಲೆ" ಎಂದಿದ್ದರೆ ಅವನನ್ನು ಯಾರು ಹೊಡೆಯುತ್ತಿದ್ದರು? ಕತೆ ಹೇಳಬಹುದಾಗಿತ್ತಲ್ಲಾ! ಎಂಬುದು. ಮಂಜಣ್ಣ ಮುದುಕ; ನಾವು ಹುಡುಗರು ಎಂಬುದು ನಮಗೆ ತಿಳಿದಿರಲಿಲ್ಲ. ಕತೆ ಕೇಳುವುದು ನಮಗೆ ಸಂತೋಷಕರವಾಗಿದ್ದರೂ ಹೇಳುವ ಅವನಿಗೆ ಸ್ವಲ್ಪವೂ ಹಾಗಿರಲಿಲ್ಲ ಎಂಬುದು ನಮಗೆ ಗೊತ್ತೇ ಇರಲಿಲ್ಲ. ಅವನು ಕೆಲಸಮಾಡಿ ದಣಿದು ಹಸಿದು ಬಂದ ಬಡವನೆಂಬುದು ಮರತೇಹೋಗಿದ್ದಿತು.

ಮಂಜಣ್ಣ ಊಟಮಾಡಿಕೊಂಡು ಬಂದ. ಎಲೆಯಡಕೆಯ ಚೀಲವನ್ನು ಬಿಚ್ಚಿ ಚೆನ್ನಾಗಿ ಧೋರಣೆಯಿಂದ ನಾವಕಾಶವಾಗಿ ಎಲೆ ಹಾಕಿಕೊಂಡ. ನಾವು ಮಾತ್ರ ಮನದಲ್ಲಿ "ಇವನೇಕೆ ಇಷ್ಟು ತಡ ಮಾಡುವನು? ನಮ್ಮಂತೆ ಚುರುಕಾಗಿಲ್ಲವಲ್ಲಾ" ಎಂದುಕೊಳ್ಳುತ್ತಿದ್ದೆವು. ಆಹಾ! ಮುದಿತನವು ನಮ್ಮನ್ನು ಕೂಡ ಅದೇ ಗತಿಗೆ ತಂದಿಡುವುದೆಂಬುದು ನಮಗೆ ತಿಳಿಯದೆ ಇದ್ದುದು ನಮ್ಮ ಸುಕೃತಕ್ಕೆಂದೇ ಹೇಳಬೇಕು.

ಅಂತೂ ಕಡೆಗೆ ಕತೆಯು ಪ್ರಾರಂಭವಾಯಿತು. ಮುಂಗಾರು ಮಳೆಯು ಮಲೆನಾಡಿನ ದಟ್ಟವಾದ ಅರಣ್ಯದಿಂದಾವೃತವಾದ ಗಿರಿಗಳ ಮೇಲೆ ಬಿಡುವಿಲ್ಲದೆ ನಿರಂತರವಾಗಿ ಜಿರ್ರೆಂದು ಸುರಿಯುತ್ತಲೇ ಇತ್ತು. ಮನೆಯ ಮುಂದುಗಡೆ ಇರುವ ತೋಟದಲ್ಲಿ ಬಾಳೆಯ ಎಲೆಯಮೇಲೆ ಹನಿಗಳು ಬಿದ್ದು ಪಟಪಟವೆಂಬ ಮ್ಲಾನಸರವವನ್ನುಂಟುಮಾಡುತ್ತಿದ್ದುವು. ನಿಶೆಯು ಭೀಕರವಾಗಿ ಕೈವಲ್ಯಶೂನ್ಯತೆಯ ಗಭೀರತೆಯನ್ನು

ಮನಸ್ಸಿಗೆ ತರುವಂತಿತ್ತು. ಅಂದು ಆ ರಾತ್ರಿ, ಆ ಗಳಿಗೆಯಲ್ಲಿ, ಸರ್ವ ಸೃಷ್ಟಿಯೂ ಉತ್ಪತ್ತಿಯಾದುದು–ನಾವು ಕತೆ ಕೇಳಲೆಂದು, ಮಂಜಣ್ಣ ಕತೆ ಹೇಳಲೆಂದು, ನಮ್ಮ ಮನಸ್ಸಿಗೆ ತೋರಿತು. ನಮ್ಮ ಹೊರಗಡೆ ಲೋಕವಿದೆ ಎಂಬುದನ್ನು ಮರೆತಿದ್ದೆವು. ಜಗತ್ತಿನಲ್ಲಿ ನಮ್ಮದಲ್ಲದ ಇತರ ಮಹಾಕಾರ್ಯಗಳು ನಡೆಯುತ್ತಿವೆ ಎಂಬುದನ್ನೂ ಮರೆತಿದ್ದೆವು. ಆಹಾ! ಅದು ಎಂತಹ ದಿವ್ಯಸ್ಮೃತಿಯು!

ಮೋಕ್ಷ ಎಂದರೆ ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಭಾವನೆ ಉಂಟಾಗಬಹುದು. ನನ್ನ ಆ ಮುದ್ದು ಮೋಕ್ಷದ ದರ್ಶನ ಚಿತ್ರ ಎಂದರೆ ಇದು: ಬ್ರಹ್ಮಾಂಡ! ಮನಸ್ಸು ಲಯವಾದ ಮಸಗು ಬ್ರಹ್ಮಾಂಡ! ಅದರ ಸ್ವಪ್ನಗಭೀರವಾದ ಕೇಂದ್ರಸ್ಥಾನ! ರವಿಯಿಲ್ಲ; ಶಶಿಯಿಲ್ಲ; ತಾರಕೆಗಳಿಲ್ಲ! ನೀಲಮೇಘಾಂಧಕಾರ! ಮಳೆಯು ನಿರಂತರವಾಗಿ ಸದಾ ಸುರಿಯುತ್ತಿರುವುದು. ಅದೊಂದು ಮಹಾ ಏಕಾಂತ! ಅಲ್ಲಿ, ಆ ರಹಸ್ಯವಾದ ಬ್ರಹ್ಮಕೇಂದ್ರದಲ್ಲಿ, ಒಂದು ಮುರ ಬೇಯಿಸುವ ಒಲೆ! ಅದರಲ್ಲಿ ಸರ್ವದಾ ಝುಗಿಸುವ ಬೆಂಕಿ! ಅದರ ಬಳಿ ನಾವು— ನಾನು, ಕಿಟ್ಟು, ಮಂಜಣ್ಣ, ವಾಸು, ಸೀತೆ ಇಷ್ಟೇ ಜನರು ಚಳಿಕಾಯಿಸುತ್ತಾ ಕುಳಿತಿರುವೆವು. ವೃದ್ಧಮೂರ್ತಿಯು ಮಸುಕಾದ ಆ ಬೆಂಕಿಯ ಬೆಳಕಿನಲ್ಲಿ ಕತೆ ಹೇಳುತ್ತಿರುವನು–ಎಂದಿಗೂ ಮುಗಿಯದ ಕತೆ! ನಾವು ಏಕಾಗ್ರಚಿತ್ತರಾಗಿ ಆತನ ಮುಖದ ಕಡೆ ನೋಡುತ್ತಾ ಕತೆ ಕೇಳುತ್ತಲೇ ಇರುವೆವು–ಎಂದಿಗೂ ಮುಗಿಯದ ಕತೆ!

---

# ರಾಮರಾವಣರ ಯುದ್ಧ

ಬೈಗಿನಿಂದ ಬೆಳಗಾಗುವವರೆಗೂ ಪೆರಡೂರು ಮೇಳದ ಭಾಗವತ ರಾಟ ನೋಡಿ ಬಂದು, ಅಡುಗೆ ಮನೆಯ ಒಲೆಯ ಬಳಿ ಚಳಿಕಾಯಿಸುತ್ತ, ಕಾಫಿ ಕುಡಿಯುತ್ತ ಹರಟುತ್ತಿದ್ದೆವು. ನಮ್ಮೂರ ಕಡೆ ಬಯಲಾಟ ವನ್ನು ಭಾಗವತರಾಟ ಎಂದು ಕರೆಯುತ್ತಾರೆ. ರಾತ್ರಿ ನಾವು ನೋ ಡಿದ್ದ 'ಕಾಳಗ' ರಾಮರಾವಣರದು. ಹುಡುಗರಿಗೆ ಕಂಡಿದ್ದನ್ನೆಲ್ಲ ಬಿಡದೆ ಅನುಕರಿಸುವುದೊಂದು ಹುಚ್ಚಷ್ಟೆ! ಅದರಂತೆಯೆ ನಾವೆಲ್ಲ— ನಾನು, ತಿಮ್ಮು, ಮಾಸು, ಓಬು, ಎಂಕ್ಟು, ವಾಸು, ದಾನಿ, ರಾಜಿ— ಆ ದಿನ ರಾಮರಾವಣರ 'ಕಾಳಗ' ಆಡಬೇಕೆಂದು ಮಸಲತ್ತು ಮಾಡಿ ದೆವು. ಹುಡುಗರ ಲೋಕದಲ್ಲಿ ಯೋಚನೆ ಮಾಡಿದ್ದೆಲ್ಲ ಆಗಿಯೆ ಆಗು ವುದು. ಕಾಫಿ ಉಪ್ಪಿಟ್ಟುಗಳನ್ನು ಬೇಗ ಬೇಗ ಹೊಟ್ಟೆಗೆ ಸುರಿದು ಕೊಂಡು, ಮನೆಯ ಹೊರ ಅಂಗಳಕ್ಕೆ ಹೊರಟೆವು. ಅಮ್ಮ, ಚಿಕ್ಕಮ್ಮ, ಅಕ್ಕಯ್ಯ ಇವರೆಲ್ಲ "ರಾತ್ರಿ ನಿದ್ದೆಗೆಟ್ಟಿದ್ದೀರಿ. ಮಲಗಿಕೊಳ್ಳಿ" ಎಂದು ಬಯ್ದರು. ದೊಡ್ಡವರು ಹುಡುಗರನ್ನು ತಮ್ಮಂತೆಯೆ ಎಂದು ಭಾವಿಸುವುದು ಶುದ್ಧತಪ್ಪು. ಅವರಿಗೆ ಆಯಾಸವಾಗಿದ್ದರೆ, ನಮಗೂ ಆಯಾಸವೇ? ನಮ್ಮ ರಾಮರಾವಣರ ಯುದ್ಧದ ಮುಂದೆ ಅವರ ನಿದ್ದೆಯೇ? ಅವರ ಮಾತನ್ನು ಕಸದ ಮೂಲೆಗೆ ಒತ್ತಿ, ಹೊರ ಅಂಗ ಳಕ್ಕೆ ಓಡಿದೆವು. ಒಬ್ಬರನ್ನೊಬ್ಬರು ಆತುರದಿಂದ ಹುರಿದುಂಬಿಸುತ್ತ, ಕೇಕೆಹಾಕುತ್ತ ನುಗ್ಗಿದೆವು. ರಾಜಿ ಹೊಸಲನ್ನು ಎಡವಿ ಬಿದ್ದವಳು, ಮೆಲ್ಲನೆ ಎದ್ದು, ಸುತ್ತಲೂ ನೋಡಿ, ಯಾರೂ ನೋಡದೆ ಇದ್ದುದರಿಂದ ಪದ್ಧತಿಯಂತೆ ಬಿಕ್ಕಿಬಿಕ್ಕಿ ಅಳುವುದನ್ನು ತಡೆದು ಗುಂಪನ್ನು ಸೇರಿ ಕೊಂಡಳು.

ಹೊತ್ತಾರೆಯ ಹೊತ್ತು ಮಲೆನಾಡಿನ ಹಸುರಾದ ಬೆಟ್ಟಗಳ ತುದಿಯಿಂದ ಎಳೆ ಬಿಸಿಲನ್ನು ಚಿಮುಕಿಸುತ್ತಿತ್ತು. ಹೊರ ಅಂಗಳ

ದಲ್ಲಿದ್ದ ದೊಡ್ಡ ಬಸಿರಿ ಮರದಲ್ಲಿಯೂ, ಹುಣಿಸೆಮರದಲ್ಲಿಯೂ ಹಕ್ಕಿಗಳ ಹಿಂಡು ಚಿಲಿಪಿಲಿಗುಟ್ಟುತ್ತಿತ್ತು. ಹಸುಳೆ ಬಿಸಿಲು ತುಸು ದಟ್ಟವಾದ ತಳಿರ ನಡುವೆ ನುಗ್ಗಿ ಬರುತ್ತಿದ್ದುದರಿಂದ ಮರದ ನೆರಳು ಬಲೆಬಲೆಯಾಗಿತ್ತು. ಆ ಬಲೆನೆರಳೆ ನಮ್ಮ 'ರಂಗಸ್ಥಳ'ವಾಯಿತು. ಈಗ ನಮ್ಮ ಮನೆಗೆ ಹೋಗಿ ನೋಡಿದರೆ, ಆ ಹುಣಿಸೆಮರವೂ ಮಾಯವಾಗಿದೆ, ಆ ಬಸಿರಿಮರವೂ ಮಾಯವಾಗಿದೆ. [ಜೊತೆಗೆ ಅಂದು ನನ್ನೊಡನೆ ಭಾಗವತರಾಟವಾಡಿದ ಸೋದರ ಸೋದರಿಯರೂ ಅನಂತ ವಿಶ್ವದಲ್ಲಿ ಅಡಗಿ ಮಾಯವಾಗಿದ್ದಾರೆ. ಆ ಕಾಲವೊಂದಿತ್ತು!] ನಾನು ಮಾತ್ರ ನನ್ನ ತಾತ ಮುತ್ತಾತರನ್ನಾದರೂ ಮರೆತೇನು! ಆದರೆ ಆ ಹುಣಿಸೆಮರ ಬಸಿರಿಮರಗಳನ್ನು ಮಾತ್ರ ಎಂದೆಂದಿಗೂ ಮರೆಯಲಾರೆನು. ಆ ಬಸಿರಿ ಮರ ಹೋದುದೇ ನನಗೊಂದು ದೊಡ್ಡ ಸೋಜಿಗ! ಮಹಾಸಮಸ್ಯೆ! ಅಂದು ನಾವು ಆ ಬಸಿರಿಮರದ ರಾಕ್ಷಸ ಗಾತ್ರವನ್ನು ಕಂಡು, ಅದನ್ನು ಕಡಿಯಲು ಯಾರಿಂದಲೂ ಸಾಧ್ಯವಿಲ್ಲ, ತೋಟದಾಚೆಯ ಭೂತನಿಂದಲೂ ಸಾಧ್ಯವಿಲ್ಲ ಎಂದು ಯೋಚಿಸಿ ಹಿಗ್ಗುತ್ತಿದ್ದೆವು. ಆದರೆ ವಿಧಿವಿಲಾಸ! ಅಂದು ಅಸಾಧ್ಯವೆಂದು ತೋರಿದುದು ಇಂದು ಸಾಧ್ಯವಾಗಿದೆ. ಅಂದು ಸಾಧ್ಯವಾದುದು ಮಾತ್ರ ಇಂದು ಅಸಾಧ್ಯವಾಗಿ ಪರಿಣಮಿಸಿದೆ!

ಆ ಹುಣಿಸೆಮರ ಬಸಿರಿ ಮರಗಳ ಅಡಿಯಲ್ಲಿ ಎಷ್ಟು ಸೊಗಸಾದ ಪ್ರಾತಃಕಾಲಗಳನ್ನು ಕಳೆದಿದ್ದೇವೆ! ಎಷ್ಟು ಸಾರಿ ನಮ್ಮ ಜೀವನದ ಭವಿಷ್ಯದ ಬಲೆಯನ್ನು ನಾವರಿಯದಂತೆಯೆ ನೆಯ್ದಿದ್ದೇವೆ! ಎಷ್ಟುಸಾರಿ ಹೊಂಬಿಸಿಲಿನಲ್ಲಿ ನೆಲದಮೇಲೆ ಉದ್ದವಾಗಿ ಮಲಗಿದ್ದ ನಮ್ಮ ನೆರಳನ್ನು ಅಳೆದಿದ್ದೇವೆ! ಪೂರಯಿಸದಿದ್ದುದಂತಿರಲಿ! ಎಷ್ಟುಸಾರಿ ಒಬ್ಬರೊಬ್ಬರ ನೆಳಲಿನ ತಲೆಗಳನ್ನು ತುಳಿದು ಜಗಳವಾಡಿದ್ದೇವೆ! ಆಹಾ, ಆ ಇಂಪಾದ ಸನ್ನಿವೇಶಗಳನ್ನು ನೆನೆದುಕೊಂಡರೆ, "ಬಾಲ್ಯವೇ ಹೋದೆಯಾ!" ಎಂದು ಎದೆಯು ಒಳಗೊಳಗೆ ರೋದಿಸಿ ಮರುಗದಿರುವುದಿಲ್ಲ.

ಬಸಿರಿಮರದ ನೆಳಲಿನ 'ರಂಗಸ್ಥಳ'ವನ್ನು ಸೇರಿದಮೇಲೆ ರಾಮರಾವಣರ ಯುದ್ಧಕ್ಕೆ ಮುನ್ನುಡಿಯ ರೂಪವಾದ ಸಂಭಾಷಣೆಯು

ಪ್ರಾರಂಭವಾಯಿತು. ಮೊದಲು ಯಾರು ಯಾರು ಯಾವ ಯಾವ ಪಾತ್ರಗಳನ್ನು ವಹಿಸಬೇಕೆಂಬ ಪ್ರಬಲವಾದ ಚರ್ಚೆ ನಡೆಯಿತು. ತಿಮ್ಮ ನಾನು ರಾಮನ "ಪಾರ್ಟ್" ಹಾಕುತ್ತೇನೆ ಎಂದು ಹಟ ಹಿಡಿದ. ಓಬು (ಸ್ವಲ್ಪ ಖಿಲಾಡಿ) ತಿಮ್ಮ ಹೇಳಿದ್ದು ಕೇಳಿ "ಚೋಟುದ್ದ ಇದಾನೆ. ಇವನಿಗೆ ರಾಮನ ವೇಷವಂತೆ!" ಎಂದ. ಎಂಕ್ಟು ಅದನ್ನು ಸಮ್ಮತಿಸಿ "ಹೌದೊ, ತಿಮ್ಮಣ್ಣಯ್ಯ, ನಿನ್ನೆ ಭಾಗವತರಾಟದಲ್ಲಿ ರಾಮನ ವೇಷ ಹಾಕಿದ್ದವನು ಭೀಮನ ಹಾಂಗಿದ್ದ" ಎಂದ. ರಾಮನ ವೇಷದ ಹಕ್ಕು ನಿರ್ಣಯವಾಗುವ ಮುನ್ನವೇ, ವಾಸು ತಾನು ಲಕ್ಷ್ಮಣನಾಗುತ್ತೇನೆ ಎಂದ. ಓಬು ಮತ್ತೆ "ಒಂದು ಮಣ ತೂಕಾನೂ ಇಲ್ಲ. ಲಕ್ಷ್ಮಣ ಆಗ್ತಾನಂತೆ! ನೀನು ಹನುಮಂತನ ಪಾರ್ಟಿಗೆ ಲಾಯಖ್ಖು! ನಿನ್ನ ಮುಖಾನೂ ಹಾಂಗೇ ಇದೆ ಕಾಣೋ" ಎಂದ. ವಾಸುವಿಗೆ ಎಂದೂ ಬರದ ಸಿಟ್ಟು ಬಂದು ಓಬುವನ್ನು ಹೊಡೆಯಲು ಹೋದ. ಆದರೆ ವಾಸುವ ಸಿಟ್ಟಿಗಿಂತ ಓಬುವ ರಟ್ಟೆಯೇ ಬಲವಾಗಿತ್ತು; ಪೆಟ್ಟು ಬೀಳಲು ಸಿಟ್ಟು ಓಡಿತು. ಅಷ್ಟರಲ್ಲಿ ನಾನು (ಸುಮ್ಮನಿರಬೇಕೋ ಇಲ್ಲವೋ) ರಾಜಿಯನ್ನು ಕುರಿತು "ರಾಜೀ, ನೀನು ಲಂಕಿಣಿಯ ಪಾರ್ಟು ಹಾಕೇ" ಎಂದು ತಡೆಯಲಾರದೆ ನಕ್ಕುಬಿಟ್ಟೆನು. ರಾಜಿ ತನಗೆ ಲಂಕಿಣಿಯ ವೇಷ ಬೇಡವೆಂದು ಹೇಳುವ ಸಿಟ್ಟಿನ ರಭಸದಲ್ಲಿ ಸಾಕ್ಷಾತ್ ಲಂಕಿಣಿಯೇ ಆಗಿಬಿಟ್ಟು ಬಾಯಿಗೆ ಬಂದಂತೆ ನನ್ನ ಮೇಲೆ ಬೈಗುಳದ ಮಳೆಗರೆದಳು. ನಾನು (ಕುಚೇಷ್ಟೆಯ ಹುಡುಗ) ರಾಜಿಯನ್ನು ಮತ್ತೂ ಕೆಣಕಬೇಕೆಂದು ಯೋಚಿಸಿ ಒಂದು ವಿಧವಾದ ಅಣಕಿಸುವ ದನಿಯಿಂದ "ಓಹೋ, ಮತ್ತೇನು ನಿನಗೆ ಸೀತೆಯ ಪಾರ್ಟು ಕೊಡ್ತಾರೆ ಎಂದು ಹಾರೈಸಿಕೊಂಡಿದ್ದೆಯಾ? ಏನಪ್ಪಾ ಈ ಹುಡುಗಿಯರಿಗೆ ಈಗಾಗಲೇ ಗಂಡರ ಯೋಚನೆ" ಎಂದ. ಸೀತೆಯ ವೇಷವನ್ನು ಬಯಸಿದ ರಾಜಿಯ ಮುಖವು ಆಗಲೇ ಹನುಮಂತನ ಮುಖವಾಗುತ್ತಾ ಇತ್ತು. ಅಷ್ಟರಲ್ಲಿ ಓಬು "ಅವಳ ಮುಖವಾದರೂ ಚೆನ್ನಾಗಿದೆಯೆ? ತಿಮ್ಮ, ನೀನೆ ಹೇಳೋ, ಅವಳ ಮುಖ ಯಾರ ವೇಷಕ್ಕೆ ಲಾಯಖ್ಖಾಗಿದು

ದೆಂದು'' ಎಂದು ಹೇಳಿ ಕುಣಿಕುಣಿದು ನಕ್ಕನು. ತಿಮ್ಮ ಅವಳ ಮುಖದ ಕಡೆಗೆ ಸ್ವಲ್ಪ ಹೊತ್ತು ನಿಟ್ಟಿಸಿ ನೋಡಿದನು. ರಾಜಿ ಮುಖ ಮುಚ್ಚಿಕೊಂಡಳು. ಆದರೂ ತಿಮ್ಮ ಓಬುವಿನ ಕಡೆಗೆ ತಿರುಗಿ "ಅಲ್ಲೋ ಓಬು, ನೀನು ಯಾವ ವೇಷ ಹಾಕ್ತೀಯೊ ಆ ವೇಷದ ತಂಗಿ ಪಾರ್ಟಿಗೆ ರಾಜಿಯೇ ಸರಿ'' ಎಂದ. ಎಲ್ಲರೂ ಗೊಳ್ಳೆಂದು ಕೈಚಪ್ಪಾಳೆ ಹೊಡೆದು ನಕ್ಕರು. ಓಬುವಿಗೆ ಮುಖಭಂಗವಾಯಿತು. ರಾಜಿಗೂ ಮುಯ್ಯಿ ತೀರಿಸಿಕೊಂಡಹಾಗಾಗಿ ಸಮಾಧಾನವಾಯಿತು. ಕಡೆಗೆ ಎಲ್ಲರೂ ಸೇರಿ ಮಾನುವೇ ರಾಮನ ಪಾರ್ಟು ಹಾಕುವುದು ಎಂದು ನಿರ್ಣಯಿಸಿದೆವು. ದಾನಿಯೇ ಸೀತೆಯ ಪಾರ್ಟು ಹಾಕ ಬಹುದೆಂದು ಕೆಲವರು ಸೂಚನೆ ಕೊಟ್ಟರು. ಆದರೆ ನನಗೇಕೋ ಅದು ಸರಿಬೀಳಲಿಲ್ಲ. ದಾನಿಗೆ ಮಾನು ಕಕ್ಕ, ದಾನಿ ಮಾನುಗೆ ಮಗಳಾದ ಹಾಗಾಯಿತು. ಹಾಗೆಂದ ಮೇಲೆ ಮಾನು ರಾಮನ ವೇಷ ಹಾಕಿದರೆ ದಾನಿ ಸೀತೆ ವೇಷಹಾಕುವುದು ನನಗೆ ಸರಿಬೀಳಲಿಲ್ಲ. ಕಡೆಗೆ ಓಬು ಬಂದು ಸಮಾಧಾನ ಹೇಳಿದ: ಆಟದ ರಾಮ, ಆಟದ ಸೀತೆ; ಅದ್ದರಿಂದ ಪರವಾ ಇಲ್ಲೆಂದು. ನನಗೂ ಅವನ ಸಿದ್ಧಾಂತ ಮನಸ್ಸಿಗೆ ಒಪ್ಪಿತು. ಹುಂ ಎಂದೆ. ಕಡೆಗೆ ಅತ್ತ ಬಿದ್ದು ಇತ್ತ ಬಿದ್ದು ರಾವಣನ ಪಾರ್ಟು ನನ್ನ ಮೇಲೇ ಬಿತ್ತು. ನನಗೆ ಹೇಗಾದರೂ ರಾವಣನ ವೇಷ ಬಿಟ್ಟು ಬಿಡಬೇಕೆಂದು ಆಸೆ. ಅದಕ್ಕಾಗಿ, ನನಗೆ ಒಂಬತ್ತು ತಲೆ ತಂದು ಕೊಟ್ಟ ಹೊರತೂ ನಾನು ರಾವಣನಾಗುವುದೇ ಇಲ್ಲ ಎಂದು ಹಟ ಹಿಡಿದು ಬಿಟ್ಟೆ. ಸೂತ್ರಧಾರನಾದ ಮಾನುವಂತೂ ಕಂಗೆಟ್ಟು ಹೋದ. ದಾನಿಗೂ ತುಂಬಾ ಉದ್ವೇಗ.— ತನ್ನ ಸೀತೆಯ ಪಾರ್ಟು ರಾವಣನಿಲ್ಲದೆ ಎಲ್ಲಿ ನಿಂತು ಹೋಗುವುದೋ ಎಂದು. ಓಬು ರಾವಣನಿಗೆ ಹತ್ತುತಲೆ ಇರಲೇ ಇಲ್ಲವೆಂದು ಸಾಧಿಸಲು ಬಹಳ ಪ್ರಯತ್ನಪಟ್ಟ. ನಾನು ಅವನಿಗೆ ಬಿಟ್ಟು ಕೊಡುವೆನೇ? "ಕಣ್ಣಿಂಗಿ ಹೋಗಿತ್ತೇನೊ ನಿನಗೆ? ನಿನ್ನೆ ಭಾಗವತರಾಟದಲ್ಲಿ ರಾವಣನಿಗೆ ಹತ್ತು ತಲೆ ಇರಲಿಲ್ಲವೇನೋ?'' ಎಂದು ಕೋಪದಿಂದ ನುಡಿದೆನು. ಅಷ್ಟು ಹೊತ್ತಿಗೆ ನನ್ನ ದುರದೃಷ್ಟಕ್ಕೆ ಸರಿಯಾಗಿ, ಹಿಂದಿನ ರಾತ್ರಿ ರಾವಣನ ವೇಷ

ಹಾಕಿದ್ದ ಸೀನಪ್ಪಯ್ಯನವರು ದೂರದಲ್ಲಿ ಹೋಗುತ್ತಿದ್ದರು. ಓಬು ಅವರನ್ನು ಕಂಡು "ನೋಡಿ, ಎಲ್ಲಾ ನೋಡಿ. ನಿನ್ನೆ ಸೀನಪ್ಪಯ್ಯನವರೆ ರಾವಣನಾಗಿದ್ದದ್ದು. ಅವರಿಗೆ ಹತ್ತು ತಲೆ ಇದೆಯೆ? ಒಂದೂ ಪೂರ್ತಿಯಾಗಿಲ್ಲ." ಎಂದ. ವಾಸ್ತವವಾಗಿಯೂ ಸೀನಪ್ಪಯ್ಯನವರಿಗೆ ಒಂದು ತಲೆಯೂ ಪೂರ್ತಿಯಾಗಿರಲಿಲ್ಲ. ಏನೋ ಆಗಿ ಸ್ವಲ್ಪ ಮುಕ್ಕಾಗಿತ್ತು. ನನಗಂತೂ ಪೇಚಾಟಕ್ಕೆ ಬಂತು. ಓಬುವಿನ ಪ್ರತ್ಯಕ್ಷ ಪ್ರಮಾಣದ ಮುಂದೆ ನನ್ನಾಟ ನಡೆಯದೇ ಹೋಯಿತು. ರಾವಣನಾಗಲು ಒಪ್ಪಿಕೊಂಡೆ.

ನನಗೇ ರಾವಣನ ವೇಷ ಕೊಡಲು ಮುಖ್ಯಕಾರಣನಾಗಿದ್ದ ಓಬುವಿನ ಮೇಲೆ ರಚ್ಚೆಟ್ಟು ಮುಯ್ಯಿ ತೀರಿಸಿದೆ. ಅದು ಹೇಗೆನ್ನುವಿರೋ? ಓಬು ಹನುಮಂತನಾದರೆ ನಾನು ರಾವಣನಾಗುವೆ, ಇಲ್ಲದಿದ್ದರೆ ಇಲ್ಲವೆಂದು ಹಟಹಿಡಿದೆ. ಇದರ ಒಳಗುಟ್ಟು ಬೇರೆ. ಏನು ಅನ್ನುತ್ತೀರೋ! ಓಬು ಹನುಮಂತನಾದರೆ ರಾವಣನ ಮೇಲೆ ಯುದ್ಧಕ್ಕೆ ಹೋಗುವನು. ಆಗ ನಾನು ಅವನನ್ನು ಹೊಡೆಯಲು ಒಂದು ಸುಸಮಯ ದೊರಕುವುದು ಎಂದು. ಓಬು ಹನುಮಂತನಾದ. (ಹೊಸದಾಗೇನೂ ಆಗಲಿಲ್ಲ!) ಬಲಾತ್ಕಾರದಿಂದ ರಾಜಿಗೆ ಲಂಕಿಣಿ ಪಾರ್ಟು ಕೊಟ್ಟೆವು. ನಮ್ಮದೆಲ್ಲಾ ಒಂದೇ ಮದ್ದು: ರಾಜಿ ಲಂಕಿಣಿ ಪಾರ್ಟು ವಹಿಸಿಕೊಂಡರೇ ನಮ್ಮ ಜೊತೆ ಸೇರಿಸಿಕೊಳ್ಳುವೆವು; ಇಲ್ಲದಿದ್ದರೆ ಅವಳ ಸಂಗ ಬಿಟ್ಟು ಬಿಡುವೆವು ಎಂದು ಎಲ್ಲರೂ ಹೇಳಿಬಿಟ್ಟೆವು. ಹುಡುಗರ ಭಾಗಕ್ಕೆ ಸಂಗ ಬಿಡುವುದಾದರೆ ಗಡಿಪಾರು ಮಾಡಿಸಿಕೊಳ್ಳುವದಕ್ಕಿಂತಲೂ ಕಠಿನತರವಾದ ಶಿಕ್ಷೆ. ರಾಜಿ ಮನಸ್ಸಿಲ್ಲದ ಮನಸ್ಸಿನಿಂದ ಒಪ್ಪಿಕೊಂಡಳು; ಲಂಕಿಣಿಯಾದಳು.

ರಾಮನ ಪಾರ್ಟಾಯಿತು; ಸೀತೆಯ ಪಾರ್ಟಾಯಿತು; ಹನುಮಂತ ರಾವಣರ ಪಾರ್ಟುಗಳೂ ಆದುವು. ಲಂಕಿಣಿಯೂ ಸಿಕ್ಕಿದ ಹಾಗಾಯಿತು. ನಾನು ರಾವಣ; ಪುಾನು ರಾಮ; ದಾಸಿ ಸೀತೆ; ಓಬು ಹನುಮಂತ; ರಾಜಿ ಲಂಕಿಣಿ; ಇನ್ನು ಉಳಿದವರು ಯಾರು? ಆಗ ನಮಗೆ ವಾಲ್ಮೀಕಿ ರಾಮಾಯಣವೇ ಪ್ರಮಾಣಗ್ರಂಥವಾಗಿರ

ಲಿಲ್ಲ. ಬೇಕಾದರೆ, ನಮ್ಮದೇ ಒಂದು ಹೊಸ ರಾಮಾಯಣವನ್ನು ರಚಿಸುತ್ತಿದ್ದೆವು. ಏಕೆ ರಚಿಸಬಾರದು? ಕೋಟ್ಯಂತರ ರಾಮಾಯಣಗಳಿದ್ದುವಂತೆ. ನಮ್ಮ ರಾಮಾಯಣವು ಕಳೆದು ಹೋದ ರಾಮಾಯಣಗಳಲ್ಲಿ ಒಂದು! ರಾಮಾಯಣದಲ್ಲಿ ನ್ಯಾಯವಾಗಿ ಭೀಮ ಬರುವುದಿಲ್ಲ. ಆದರೂ ಚೋಟುದ್ದ ವಾಸು ಭೀಮನಾಗುತ್ತೇನೆ ಎಂದು ಹಟಹಿಡಿದ. ನಾವು ಎಷ್ಟೆಷ್ಟೋ ಹೇಳಿದೆವು, ರಾಮಾಯಣ ಭೀಮಾಯಣವಲ್ಲ ಎಂದು. ಆದರೇನು ಮಾಡುವುದು? ಅವನಿಗೆ ಭೀಮನ ಪಾರ್ಟು ಎಂದರೆ ಬಹಳ ಖುಷಿ. ಎಂದೋ ಒಂದು ಸಾರಿ ಭಾಗವತರಾಟದಲ್ಲಿ ಭೀಮ ಮಂಡಕ್ಕಿ (ಪುರಿ) ಕಡಲೆ ಮುಕ್ಕುತ್ತಿದ್ದುದನ್ನು ನೋಡಿಬಿಟ್ಟಿದ್ದ. ಭೀಮನ ವೇಷ ಹಾಕಿದಾಗಲೆಲ್ಲ ಕಡಲೆ ಮಂಡಕ್ಕಿ ಸಿಗುವುದೆಂದು ಅವನ ಮಹದಾಕಾಂಕ್ಷೆ! ಆಡುವುದು ರಾಮಾಯಣವಾಗಲಿ, ಶಾಕುಂತಲವಾಗಲಿ, ಚಂದ್ರಹಾಸವಾಗಲಿ, ಮತ್ತೇನೇ ಆಗಲಿ, ವಾಸುವಂತೂ ಭೀಮನ ಪಾರ್ಟು ಹಾಕಲೇಬೇಕು! ನಮಗೆಲ್ಲ ಒಳ್ಳೆ ರಗಳೆಗೆ ಇಟ್ಟುಕೊಂಡಿತು, ಭೀಮನನ್ನು ರಾಮ ರಾವಣರ ಯುದ್ಧದಲ್ಲಿ ಹೇಗೆ ತರುವುದು ಎಂದು. ರಾಮಾಯಣದಲ್ಲಿ ಭೀಮ ಬರುವುದಿಲ್ಲ ಎಂದರೆ ವಾಸು ಕೇಳಲಿಲ್ಲ; ಅಷ್ಟಕ್ಕೆ ನಿಲ್ಲದೆ ಬಂದೇಬರುತ್ತದೆ ಎಂದು ಸಾಧಿಸಿಬಿಟ್ಟ. ನಮ್ಮಲ್ಲಿ ಯಾರೂ ರಾಮಾಯಣ ಓದಿರಲಿಲ್ಲ; ನಾವು ಆಡಿದ್ದೆ ರಾಮಾಯಣ! ಆದ್ದರಿಂದ ವಾಸು ಹೇಳಿದ್ದೇ ರಾಮಾಯಣವಾಗಬೇಕಾಗಿ ಬಂತು. ಸರಿ, ಅಭಿನವವಾಲ್ಮೀಕಿಯಾದ ಅವನನ್ನೇ ಕೇಳಿದೆವು – ರಾಮಾಯಣದಲ್ಲಿ ಭೀಮನ ವೇಷ ತರುವುದು ಹೇಗೆ ಎಂದು. ಅವನೂ ಸ್ವಲ್ಪ ಯೋಚಿಸಿದ. ಹೊಸ ಕವಿತೆ ಬರೆಯ ಬೇಕಾದರೆ, ಪಾಪ, ಆವೇಶ ಬರಬೇಕಷ್ಟೆ! ಕಡೆಗೂ ಆವೇಶ ಬಂತು: ರಾಮರಾವಣರಿಬ್ಬರೂ ಯುದ್ಧಕ್ಕೆ ಹೊರಡುವ ಮುಂಚೆ ಭೀಮಪೂಜೆ ಮಾಡಿ, ಬೇಕು ಬೇಕಾದ ಭಕ್ಷ್ಯಭೋಜ್ಯಗಳನ್ನು ನಿವೇದಿಸಬೇಕೆಂದು ವಾಸು ಸಲಹೆ ಕೊಟ್ಟ. ಅಯ್ಯೋ ಅವನ ಮಸಣ! ಭಕ್ಷ್ಯಭೋಜ್ಯವೆಂದರೇನು? ಮಂಡಕ್ಕಿ, ಕಡಲೆ! ಅಂತೂ ಅಭಿನವ ವಾಲ್ಮೀಕಿಗಳು ಹೇಳುವಾಗ, ಅಲ್ಲ ಎನ್ನುವು

ದಕ್ಕಾದೀತೆ? ಹುಂ ಎಂದು ಸಮ್ಮತಿ ಕೊಟ್ಟುಬಿಟ್ಟೆವು. ಇನ್ನು ಉಳಿದವರು ಎಂಕ್ಟು, ತಿಮ್ಮು; ಅವರಿಗೆ ಪಾರ್ಟು ಕೊಡದಿದ್ದರೆ ಅವರೇನೂ ಸುಮ್ಮನಿರುವುದಿಲ್ಲ. ರಾಮಾಯಣವನ್ನೇ ನಿಲ್ಲಿಸಿಯೂ ಬಿಡಬಹುದು ಎಂಬ ಭಯ ಬೇರೆ. ಎಂಕ್ಟು ವಿಭೀಷಣನಾದ; ತಿಮ್ಮು ಕುಂಭಕರ್ಣನಾದ (ತನ್ನ ಸ್ವಭಾವಕ್ಕೆ ತಕ್ಕಂತೆ)! ಅಂತೂ ರಾಮಾಯಣದಲ್ಲಿರುವ ಪಾತ್ರಗಳಿಗೆ ನಮ್ಮ ಪಾತ್ರಗಳನ್ನು ಜೋಡಿಸುವುದಕ್ಕೆ ಬದಲಾಗಿ, ನಮ್ಮ ನಮ್ಮ ಮನಸ್ಸಿಗೆ ಬಂದ ಪಾತ್ರಗಳನ್ನು ಆರಿಸಿಕೊಂಡು ಹೊಸ ರಾಮಾಯಣ ಮಾಡಿದೆವು.

ರಾಮ ರಾವಣರು ಯುದ್ಧಕ್ಕೆ ಹೊರಡುವ ಮುನ್ನ "ಭೀಮ ಪೂಜೆ"ಗೆ ಆರಂಭವಾಯಿತು. ವಾಸು (ನಮ್ಮ ಗಾಳಿ ಭೀಮ) ಹುಣಿಸೆಯ ಮರದ ಬೇರಿನ ಮೇಲೆ ಕಲ್ಲಿನ ಮೂರ್ತಿಯಾಗಿ ಕುಳಿತುಕೊಂಡ. ರಾಮ ರಾವಣರು ಇಬ್ಬರೂ ಒಟ್ಟಿಗೆ ಬಂದು ಪೂಜೆ ಮಾಡಬೇಕೋ, ಅಥವಾ ಬೇರೆ ಬೇರೆಯಾಗಿ ಬಂದು ಪೂಜೆಮಾಡಬೇಕೊ, ಎಂದು ಅಭಿನವ ವಾಲ್ಮೀಕಿಯನ್ನು ಕೇಳಿದೆವು. ಭೀಮನಾಗಿದ್ದ ವಾಸು "ಬೇರೆ ಬೇರೆಯಾಗಿಯೇ ಬಂದು ಪೂಜೆಮಾಡಬೇಕು" ಎಂದು ಅಪ್ಪಣೆ ಮಾಡಿದನು. ಇಬ್ಬರೂ ಒಟ್ಟಿಗೆ ಬಂದು ಪೂಜೆಮಾಡಿದರೆ ನೈವೇದ್ಯವು ಎಲ್ಲಿ ಕಡಿಮೆಯಾಗುವುದೋ ಎಂದು ಅವನಿಗೆ ದೊಡ್ಡ ಭಯ. ಪೂಜೆಗೆ ಮೊದಲು ರಾಮ ಬರಬೇಕೋ? ರಾವಣ ಬರಬೇಕೋ? ಎಂದು ಕೇಳಿದೆವು. ವಾಸುವಿಗೆ ಸ್ವಲ್ಪ ರಗಳೆಗಿಟ್ಟುಕೊಂಡಿತು; ಹಾಗೆಯೇ ಯೋಚನೆಮಾಡಿ "ರಾವಣನೇ ಮೊದಲು ಬರಲಿ" ಎಂದ. ವನವಾಸದಲ್ಲಿದ್ದ ರಾಮನಿಗೆ ಹೆಚ್ಚಾದ ತಿಂಡಿಯ ಪದಾರ್ಥಗಳು ಸಿಕ್ಕುವುದಾದರೂ ಹೇಗೆ? ಲಂಕಾಧಿಪತಿಯಾದ ರಾವಣನಾದರೋ, ರಾಕ್ಷಸ. ದೊಡ್ಡ ಹೊಟ್ಟೆ, ದೊಡ್ಡ ಕೈ, ದೊಡ್ಡ ತಟ್ಟೆ! ಆದ್ದರಿಂದ ತಿಂಡಿ ಹೆಚ್ಚಾಗಿ ಸಿಕ್ಕುವುದೆಂದು ಯೋಚಿಸಿದ. ವಾಸುವ ಅಂತರಂಗವನ್ನು ಅರಿತ ಓಬು ಒಂದು ಉಪಾಯ ಹುಡುಕಿದ. ನಾನೇ ರಾವಣನಾಗಿದ್ದೆನಷ್ಟೆ? ನನ್ನ ಕಿವಿಯ ಹತ್ತಿರ ಬಂದು ಪಿಸುಮಾತಿನಲ್ಲಿ, ಒಂದೆರಡು ಕಟ್ಟಿರುವೆ, ಗೊದ್ದ, ಗೆದ್ದಲು, ಮಿಡತೆ, ಕುಂ

ಬಾರ್‍ತಿಹುಳ ಇವುಗಳನ್ನು ನೈವೇದ್ಯಕ್ಕೆ ತೆಗೆದುಕೊಂಡು ಹೋಗುವಂತೆ ಹೇಳಿದನು. ಏಕೆಂದರೆ ರಾವಣನು ಮಾಂಸಾಹಾರಿಯಷ್ಟೆ! ಉಪಾಯ ವನ್ನು ಸೂಚಿಸಿದ ಓಬುವೇ ಹುಳುಗಳನ್ನು "ಸಪ್ಲೈ"ಮಾಡಿದನು. ರಾವಣನಾಗಿದ್ದ ನಾನು ಹುಳುಗಳನ್ನು ಎಲೆಯಲ್ಲಿ ಮುಚ್ಚಿಕೊಂಡು ಹೋಗಿ ಭೀಮದೇವರ ಎದುರು ನಿಂತೆ. ಅದು ರಾವಣನು ಮಾಡುವ ಪೂಜೆಯಾಗಿದ್ದರೂ ಹನುಮಂತನಾದ ಓಬುವು ಹತ್ತಿರದಲ್ಲಿಯೆ ನಿಂ ತಿದ್ದ. ಅವನು ಭೀಮನಾಗಿದ್ದ ವಾಸುವಿಗೆ "ದೇವರು ಯಾವಾ ಗಲೂ ಕಣ್ಣು ಮುಚ್ಚಿಕೊಂಡೇ ಇರಬೇಕು" ಎಂದನು. ವಾಸು ಕಣ್ಣು ಮುಚ್ಚಿಕೊಂಡ. ರಾವಣನ 'ಪೂಜೆ'ಗೆ ಪ್ರಾರಂಭವಾಯಿತು. ನೈವೇದ್ಯವನ್ನು ದೇವರ ಮುಂದಿಟ್ಟೆ. ದೇವರಿಗೆ ತಿನ್ನುವಂತೆಯೂ ಹೇಳಿದ. ವಾಸು ಕಣ್ಣು ಮುಚ್ಚಿಕೊಂಡೇ ಇದ್ದ. ನಮಗೆಲ್ಲ ಅಳ್ಳಿ ಬಿರಿಯುವ ನಗು. ಆದರೂ ಎರಡು ಕೈಗಳಿಂದಲೂ ಬಾಯಿ ಮುಚ್ಚಿ ಹಿಡಿದುಕೊಂಡಿದ್ದೆವು. ಭೀಮದೇವನು ನೈವೇದ್ಯಕ್ಕೆ ಕೈ ಹಾಕಿ ದನು. ಕಣ್ಣುಮುಚ್ಚಿಕೊಂಡಿದ್ದ ಅವನ ಚಿತ್ತಭಿತ್ತಿಯಲ್ಲಿ ತನ್ನ ಮುಂದೆ ಮಂಡಕ್ಕಿಯ ರಾಶಿಯೇ ತೋರಿರಬಹುದು! ಅವನ ಸಂತೋಷಕ್ಕೆ ಪಾರವೇ ಇಲ್ಲ!

ಓಬು ಇರುವೆಗಳನ್ನು ಸರಿಯಾಗಿ ಕೊಂದಿರಲಿಲ್ಲ. ಒಂದು ಮಿಡತೆಗೂ ಅರೆಜೀವವಿತ್ತು. ಭೀಮದೇವರಿಗೆ ತಕ್ಕ ನೈವೇದ್ಯ! ವಾಸು ಕೈಯಿಟ್ಟನೋ ಇಲ್ಲವೋ, ನೋವು ಸಿಟ್ಟುಗಳಿಂದ ಒದ್ದಾ ಡುತ್ತಿದ್ದ ಕಟ್ಟಿರುವೆಯೊಂದು ಕಡಿಯಿತು! ಅನಾಹುತವೋ ಅನಾ ಹುತ! ವಾಸು ಎಲ್ಲಿಯಾದರೂ ನಿಜವಾದ ಭೀಮನೇ ಆಗಿದ್ದ ಪಕ್ಷ ದಲ್ಲಿ ನಮಗೆಲ್ಲ ಏನು ಪರಿಣಾಮವಾಗುತ್ತಿತ್ತೊ, ದೇವರಿಗೆ ಗೊತ್ತು! ಸ್ವಲ್ಪ ಊಹಿಸಿದರೆ ರಾಮರಾವಣರ ಯುದ್ಧವೇ ನಡೆಯುತ್ತಿರಲಿಲ್ಲ ಎನ್ನಬಹುದು. ವಾಸು ಕಿಟ್ಟನೆ ಕಿರಿಚಿಕೊಂಡು, ಕೋಪಿಯ ಮದ್ದಿಗೆ ಕಿಡಿ ಬಿದ್ದಂತೆ ಎದ್ದು ನಿಂತ! ಓಬು ಒರಿಯ ಹೈಲು; ಯಾವಾಗ ಹೇಗೆ ನಡೆದುಕೊಳ್ಳಬೇಕೆಂದು ಅವನಿಗೆ ತಿಳಿಯದು. ವಾಸುವನ್ನು ಸಂಬೋ ಧಿಸಿ "ಭೀಮದೇವರೇ, ಕಲ್ಲಾದ ದೇವರು ಅಲ್ಲಾಡಬಾರದು. ಕೂತು

ಕೊಳ್ಳಿ! ಕೂತುಕೊಳ್ಳಿ!'' ಎಂದು ಕೂಗಿಕೊಂಡು ನಗಲಾರಂಭಿಸಿದನು. ಭೀಮ ಗೊಳೋ ಎಂದು ಅಳಲಾರಂಭಿಸಿದನು. ದಾಸಿ, ಸೀತೆಯಾಗಿದ್ದವಳು ಸೀತೆತನವನ್ನು ಬಿಟ್ಟು ಓಡಿ ಬಂದು ಭೀಮನ ಬಾಯಿ ಮುಚ್ಚಿ ಹಿಡಿದು ಅಳಬೇಡ ಎಂದು ಎಷ್ಟು ಹೇಳಿಕೊಂಡರೂ ಭೀಮ ಬೇರೆ ಕೇಳಲಿಲ್ಲ. ಭೀಮಗರ್ಜನೆ ಅಂತರಿಕ್ಷಕ್ಕೆ ಏರಿತು. ಇಂದ್ರನಿಗೆ ಗಾಬರಿಯಾಗಿರಬಹುದು! ರಾಮನಾಗಿದ್ದ ಮಾನುವೂ ಓಡಿಬಂದು ಭೀಮನನ್ನು ಸಂತೈಸಿದ. ರಾಜಿಯು ಮಾನುವಿಗೆ ''ನೀನೆಂಥ ರಾಮನೋ? ಕಟ್ಟಿರುವೆ ಕಡಿದದ್ದನ್ನೂ ಕೂಡ ಫಕ್ಕನೆ ಗುಣಮಾಡಲಾರೆ!'' ಎಂದು ಹೇಳಿ ''ಮಾಸಣ್ಣಯ್ಯಾ ಅಳಬೇಡ'' ಎಂದು ಸಂತವಿಟ್ಟಳು. ಅವನೇನೋ ಬೊಬ್ಬೆ ಹಾಕಿದ! ಭೀಮನ ಕೂಗಿಗೆ ತಡೆಯುಂಟೆ? ಆಕಾಶಕ್ಕೆ ಮುಟ್ಟಿದ ಭೀಮನ ಕೂಗು ಅಡುಗೆ ಮನೆಗೆ ಮುಟ್ಟುವುದೊಂದು ದೊಡ್ಡ ಮಾತೇ? ಚಿಕ್ಕಮ್ಮ ಗಾಬರಿಯಿಂದ, ಕೈಲಿ ಹಿಡಿದುಕೊಂಡಿದ್ದ ಒಗ್ಗರಣೆ ಸೌಟನ್ನು ಹಿಡಿದುಕೊಂಡೇ ಹೊರ ಅಂಗಳಕ್ಕೆ ಬಂದರು. ಬಿಸಿಬಿಸಿಯಾದ ಸಾರಿಗೆ ಅದ್ದಿದ್ದ ಸೌಟಿನಿಂದ ಇನ್ನೂ ಹಬೆಯಾಡುತ್ತಿತ್ತು. ಪಾಪ, ಅವರಿಗೆ ನಮ್ಮ ರಾಮಾಯಣದ ಪೂರ್ವೋತ್ತರವೇನು ಗೊತ್ತು? 'ಕುಶಾಲು ಹೋಗಿ ಅಸಾಲಾಯಿತು!' ಆಟಕ್ಕೆ ಬದಲು ಆಟಮಟವಾಯಿತು! ರಾವಣನಾದ ನನ್ನನ್ನು ರಾಮ ಹೊಡೆಯುವ ಬದಲು ಚಿಕ್ಕಮ್ಮ ಗುದ್ದಿದರು. ಬಿಕ್ಕಿಬಿಕ್ಕಿ ಅಳುತ್ತಿದ್ದ ಅಭಿನವ ವಾಲ್ಮೀಕಿಯನ್ನು ಚಿಕ್ಕಮ್ಮ ಅಡುಗೆ ಮನೆಗೆ ಎಳೆದುಕೊಂಡು ಹೋದರು; ಅಲ್ಲಿ ಸರಿಯಾದ ''ಭೀಮಪೂಜೆ''ಯಾಗಿರಬೇಕು!

ಭೀಮ ಹೋದರೆ ರಾಮಾಯಣ ನಿಲ್ಲುವುದೇ? ನಾವೇನೋ ರಾಮರಾವಣರ ಯುದ್ಧ ಮಾಡಿಯೇ ಬಿಡಬೇಕೆಂದು ಹಟಸಾಧಿಸಿದೆವು. ಆಟ ಪ್ರಾರಂಭವಾಯಿತು. ಎಲ್ಲಿ? ಲಂಕೆಯಲ್ಲಲ್ಲ! ಬಸಿರಿಮರದ ಬಳಿ ಬಲೆಯಾದ ತಣ್ಣೆಳಲಲ್ಲಿ! ಭೀಮಪೂಜೋಪಾಖ್ಯಾನವು ಕೊನೆಗಂಡ ಮೇಲೆ ಸೇತುಬಂಧನವಾಯಿತು. ಸೇತುಬಂಧನಕ್ಕೆ ರಾವಣ, ಕುಂಭಕರ್ಣ, ಲಂಕಿಣಿ ಎಲ್ಲರೂ ಸಹಾಯ ಮಾಡಿ

ದರು! ಸಮಯಕ್ಕೆ ತಕ್ಕಹಾಗೆ ರಾಮ ಮೊದಲಾದವರು ಮಂಗಗಳಾದರು. ಹನುಮಂತನಾದ ಓಬು ಸಣ್ಣ ಸಣ್ಣ ಪುಡಿಗಲ್ಲುಗಳನ್ನು ತರುತ್ತಿದ್ದುದನ್ನು ಕಂಡು ನಾನು "ನೀನೆಂಥಾ ಹನುಮಂತನಪ್ಪ! ವಡೆಗಳಂಥ ಕಲ್ಲು ತರುತ್ತಿದ್ದೀಯಲ್ಲ!" ಎಂದೆ. ಹನುಮಂತನು ಕೈಲಾಸ ಪರ್ವತವನ್ನು ಎತ್ತಲು ಹೋಗಿ ಕೈ ಸಿಕ್ಕಿಸಿಕೊಂಡದ್ದನ್ನು (ನಮ್ಮ ರಾಮಾಯಣದ ಪ್ರಕಾರ) ಅಭಿನಯಿಸಲೇ ಬೇಕೆಂದು ತಿಮ್ಮ ಹಟ ಹಿಡಿದ. ಸದ್ಯಕ್ಕೆ ಅವನೇ ಶಿವನಾದ. ಲಂಕಿಣಿಯಾಗಿದ್ದ ರಾಜಿ ಪಾರ್ವತಿಯಾದಳು. ಶಿವ ಪಾರ್ವತಿ ಇಬ್ಬರೂ ಮನೆ ಕಟ್ಟುವುದಕ್ಕೆ ಹೊಸದಾಗಿ ತಂದು ಹಾಕಿದ್ದ ಕಲ್ಲು ಚಪ್ಪಡಿಗಳ ಮೇಲೆ ಕುಳಿತರು. ಕಲ್ಲು ಚಪ್ಪಡಿಯೇ ಕೈಲಾಸವಾಯಿತು. ಹನುಮಂತನು ಕೈಲಾಸದ ಬಳಿಗೆ ಹೋಗಿ ಅದನ್ನು ಎತ್ತುವಂತೆ ನಟಿಸಿ ಸಂದಿಯೊಳಗೆ ಕೈಯಿಟ್ಟನು. ಶಿವನು ಕೈಲಾಸವನ್ನು ಕಾಲು ಬೆರಳಿನಿಂದ ಒತ್ತಬೇಕಷ್ಟೆ! ಹಾಗೆಯೇ ತಿಮ್ಮ ಹಾಸರೆಯನ್ನು ಬಲವಾಗಿ ಒತ್ತಿ ಹಿಡಿದನು. ಓಬುವಿಗೆ ಅತಿನೋವಾಗಿ 'ರಾಮ ರಾಮ! ರಾಮ ರಾಮ!' ಎನ್ನುತ್ತಿದ್ದವನು ಇದ್ದಕ್ಕಿದ್ದ ಹಾಗೆ ಸ್ವರ ಬದಲಾಯಿಸಿ "ತಿಮ್ಮ! ತಿಮ್ಮ! ಕೈ! ಕೈ!!" ಎಂದು ಕೂಗಿಕೊಂಡನು. ಬೆರಳಿನ ಚರ್ಮ ಸುಲಿದು ಹೋಯಿತು. ಆದರೂ ಶಿವನು ಕೈಲಾಸವನ್ನು ಇನ್ನೂ ಬಲವಾಗಿ ಒತ್ತಿದನು. ಹನುಮನ ಕೂಗು ನಟನೆಯೆಂದೇ ಭಾವಿಸಿ ತಿಮ್ಮ ಇನ್ನೂ ಬಲವಾಗಿ ಅದುಮಿದನು. ಓಬು ಗೊಳೋ ಎಂದು ಅತ್ತನು. ಕಣ್ಣಿನಲ್ಲಿ ನೀರೂ ಚಲಚಲನೆ ಉಕ್ಕಿ ಹರಿಯಿತು. ಬಳಿಯಲ್ಲಿ ನಿಂತಿದ್ದ ನಾವೆಲ್ಲರೂ ಅವನ ಅಭಿನಯ ಕೌಶಲ್ಯವನ್ನು ನೋಡಿ ಮೆಚ್ಚಿದೆವು. ಅಷ್ಟು ಸಹಜವಾಗಿ ಅಳಲು ಯಾವ ನಟಶ್ರೇಷ್ಠನಿಂದಾದರೂ ಸಾಧ್ಯವಾಗುವುದೇ?

[ದೇವರ ಕೃಪೆಯಿಂದ ನಮ್ಮ ರಾಮಾಯಣದಲ್ಲಿ ಕೈಲಾಸದಡಿಯಲ್ಲಿ ಕೈ ಸಿಕ್ಕಿ ಕೂಗಿದವನು ಹನುಮಂತ; ರಾವಣನಲ್ಲ! ಎಲ್ಲಿಯಾದರೂ ರಾವಣನಾಗಿದ್ದ ಪಕ್ಷದಲ್ಲಿ ಈ ಕತೆ ಬರೆಯುವುದಕ್ಕೂ ನನಗೆ ಕೈಬೆರಳು ಇರುತ್ತಿರಲಿಲ್ಲ; ನನ್ನ ಅದೃಷ್ಟ ಚೆನ್ನಾಗಿತ್ತು!]

ಓಬು ಕೂಗಿದ, ತಿಮ್ಮು ಅದುಮಿದ; ಹನುಮ ಅರಚಿದ, ಶಿವನು ಒತ್ತಿದ. ನಿಂತ ನಾವೆಲ್ಲ ನಟನೆಗೆ ಬಹಳ ಹಿಗ್ಗಿದೆವು! ನಮ್ಮ ಪುಣ್ಯಕ್ಕೆ ಸರಿಯಾಗಿ, ರಾಮಾಯಣದಲ್ಲಿ ಗಲ್ಲಿಗೆ ಹಾಕುವ ಪದ್ಧತಿ ಇರಲಿಲ್ಲವೆಂದು ತೋರುತ್ತದೆ. ಅದೂ ಎಲ್ಲಿಯಾದರೂ ಇದ್ದಿದ್ದರೆ ನಮ್ಮಲ್ಲಿ ಯಾವನಾದರೂ ಒಬ್ಬನ ಗತಿ ಮುಗಿಯುತ್ತಿತ್ತು. ಯಾವನಾದರೂ ಏಕೆ? ನನ್ನ ಗತಿಯೇ ಪೂರೈಸುತ್ತಿತ್ತು. ಏಕೆನ್ನುವಿರೋ? ನಾನು ರಾವಣ. ಈಗಿನ ಕಾಲದಲ್ಲಿ ಗೆದ್ದ ರಾಜರನ್ನು ಗಲ್ಲಿಗೆ ಹಾಕುವುದೇ ಧರ್ಮವಷ್ಟೆ! ಹಾಗೆಯೇ ರಾವಣನನ್ನು ಗೆದ್ದ ರಾಮನು ಸುಮ್ಮನೇ ಇರುತ್ತಿದ್ದನೇ? ರಾವಣನನ್ನು ಗಲ್ಲಿಗೆ ಹಾಕಿಸಿಯೇ ಬಿಡುತ್ತಿದ್ದ. ಅಂದರೆ ನನ್ನ ವ್ಯಾಪಾರ ಮುಗಿಯುತ್ತಿತ್ತು!

ಓಬುವಿನ ಕೂಗು ಕೇಳಿ ಅಲ್ಲೆಲ್ಲಿಯೋ ಬಳಿಯಿಂದ ಕಕ್ಕಯ್ಯ ಓಡಿ ಬಂದರು. ಬಂದವರು ದೂರ ನಿಂತು "ಏನ್ರೋ ಅದು, ಗಲಾಟೆ!" ಎಂದರು. ತಿಮ್ಮು ಚಪ್ಪಡಿ ಕಲ್ಲನ್ನು ಬಲವಾಗಿ ಅದುಮುತ್ತ "ಏನೂ ಇಲ್ಲ, ಕಕ್ಕಯ್ಯ! ರಾಮಾಯಣ ಆಡ್ತೇವೆ! ಹನುಮಂತನ ಕೈ ಕೈಲಾಸದಡಿ ಸಿಕ್ಕೊಂಡಿದೆ; ಶಿವ ಅಮುಕುತ್ತ ಇದ್ದಾನೆ!" ಎಂದನು. ಓಬು ಮಾತ್ರ ಅಯ್ಯೊಯ್ಯೊ! ಅಣ್ಣಯ್ಯಾ, ಸತ್ತೆ! ಸತ್ತೆ!" ಎಂದು ಕೂಗಿಕೊಂಡನು. ಕಕ್ಕಯ್ಯ ಓಡಿಬಂದು ಕೈಲಾಸದ ಮೇಲೆ ಕುಳಿತು ದರ್ಬಾರು ಮಾಡುತ್ತಿದ್ದ ಶಿವ ಪಾರ್ವತಿಯರಿಬ್ಬರನ್ನೂ ಈಚೆಗೆ ಎಳೆದು ಹಾಕಿ, ಕೈಲಾಸವನ್ನು ಎತ್ತಿದರು, ಓಬು ಕೈ ಎಳೆದು ಕೊಂಡ. ಚರ್ಮ ಸುಲಿದು ಹೋಗಿ ಕೈ ಬೆರಳೆಲ್ಲ ರಕ್ತಮಯವಾಗಿತ್ತು. ಕಕ್ಕಯ್ಯ ಎಲ್ಲರಿಗೂ ಹುಣಿಸೆಯ ಬರಲಿನಿಂದ ಎರಡೆರಡು 'ಚಡಿ ಕೊಟ್ಟು' ಹನುಮಂತನ ಕೈಗೆ ಔಷಧಿ ಮಾಡಲು ಅವನನ್ನು ಎಳೆದು ಕೊಂಡು ಹೋದರು. ಚಳಿಗಾಲ! ಪ್ರಾತಃಕಾಲ! ಹುಣಿಸೆಯ ಬರಲಿನ ಪೆಟ್ಟು! ನೀವೇ ಯೋಚಿಸಿ ಕೊಳ್ಳಿ!

ರಾಮರಾವಣರ ಯುದ್ಧ ಇಷ್ಟಕ್ಕೇ ಪೂರೈಸಲಿಲ್ಲ. ನಾನು ಮಾಣಿಯನ್ನು ಕುರಿತು "ನೀನೆಂಥ ರಾಮನೋ? ಕೈಲಾಗದ ರಾಮ!"

ನಿನ್ನ ಭಕ್ತ ಹನುಮಂತ ಒರಲಿದರೆ ನೀನು ಬಂದು ಬಿಡಿಸಬೇಕೋ ಬೇಡವೋ? ಕಲ್ಲು ನಿಂತಂತೆ ನಿಂತುಕೊಂಡು ನೋಡ್ತಾ ಇದ್ದೆ! ನಿನ್ನ ದೆಸೆಯಿಂದ ಭಾಗವತರಾಟ ಆಡದಿದ್ದ ಹಾಗೂ ಆಯಿತು!" ಎಂದೆ —ಪೆಟ್ಟು ಬಿದ್ದ ಸಿಟ್ಟಿನಿಂದ.

ಮಾನುಗೆ ಸಿಟ್ಟು ಬಂತು. ಮೈ ಮೇಲೆ ಬಿದ್ದ; ನನಗೂ ಅವನಿಗೂ ಹೊಡೆದಾಟವಾಯಿತು. ನ್ಯಾಯವಾಗಿ ಕತೆಯಂತೆ ನೋಡಿದರೆ ರಾವಣ ಸೋಲಬೇಕು. ವಾಸ್ತವವಾಗಿ ನಾನೇ ಬಲವಾಗಿದ್ದೆ. ರಾಮ ಬಿದ್ದ; ರಾವಣ ಗೆದ್ದ. ಕೆಳಗೆ ಬಿದ್ದ ಮಾನುವಿನ ಮೇಲೆ ನಾನು ಬಲವಾಗಿ ಜಗ್ಗಿಸಿ ಕೂತುಕೊಂಡೆ; ಅವನು ಅಳ ಅಳುತ್ತ "ಲೋ, ಪುಟ್ಟು, ನಾನು ರಾಮ ಕಣೊ! ನೀನು ರಾವಣ ಕಣೋ! ಬಿಡೋ, ನನ್ನ ಮೇಲೆ ನೀನು ಕೂತುಕೊಳ್ಳಬಾರದು" ಎಂದ. ನಾನು ಇನ್ನೂ ಬಲವಾಗಿ ಜಗ್ಗಿಸಿ "ಹೋಗೋ ನಿನ್ನ ರಾಮಾಯಣಕ್ಕೆ ಬೆಂಕಿ ಹಾಕ! ನನ್ನ ರಾಮಾಯಣದಲ್ಲಿ ನಾನೇ ಗೆದ್ದಿದ್ದು" ಎಂದೆ. ಕೆಳಗೆ ಬಿದ್ದ ರಾಮನನ್ನು ಬಿಡಿಸಿಕೊಳ್ಳಲು ಲಂಕಿಣಿ, ಸೀತೆ, ಲಕ್ಷ್ಮಣ, ಕುಂಭಕರ್ಣ, ವಿಭೀಷಣ, ಎಲ್ಲರೂ ಬಂದರು. ಆದರೂ ನಾನು ಬೇರೆ ಜಗ್ಗಲಿಲ್ಲ. ಕಡೆಗೆ ಕುಂಭಕರ್ಣನು ಓಡಿ ಹೋಗಿ ನಮ್ಮಾಳು ಲಿಂಗನನ್ನು ಕರೆತಂದ. ಅವನು ರಾವಣನನ್ನು ಹಿಡಿದೆಳೆದು ರಾಮನನ್ನು ಬಿಡಿಸಿದ. ಅಂತೂ ರಾವಣವಧೆಗೆ ಬದಲಾಗಿ ರಾಮವಧೆ ಆಗಲಿಲ್ಲ!

ಅಂದು ನಾವಾಡಿದ ಹೊಸ ರಾಮಾಯಣದ ಪ್ರಕಾರ, ರಾಮರಾವಣರ ಯುದ್ಧದಲ್ಲಿ ರಾಮನೇ ಸೋಲುವನು. ಭೀಮನು ಕಟ್ಟಿರುವೆ ಕೈಲಿ ಕಡಿಸಿಕೊಂಡು ಹೋಗುವನು. ಹನುಮಂತನು ಕೈಲಾಸದ ಕೆಳಗೆ ಕೈ ಚರ್ಮ ಸುಲಿಸಿ ಕೊಳ್ಳುವನು. ರಾಮ ಬಿದ್ದ! ರಾವಣ ಗೆದ್ದ! —ಇದೇ ನಮ್ಮ ರಾಮರಾವಣರ ಯುದ್ಧ!

